# ನಮ್ಮ ಹಿಂದುಸ್ಥಾನ

ಲೇಖಕ

ಮಿನೂ ಮಸಾನಿ

ಭಾಷಾಂತರ ಮಾಡಿದವರು

ಸಿದ್ದವನಹಳ್ಳಿ ಕೃಷ್ಣಶರ್ಮ

ಚಿತ್ರಕಾರರು

ಸಿ. ಎಚ್. ಜಿ. ಮೂರ್‌ಹೌಸ್




ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್

ಬೊಂಬಾಯಿ ಕಲ್ಕತ್ತಾ ಮದ್ರಾಸ್

NAMMA HINDUSTANA (OUR INDIA)

by

Minoo Masani

Illustrated by

C. H. G. Moorhouse

Translated into Kannada by

Siddhavanahalli Krishna Sarma

First Published in Kannada, 1942

# ಅನುಕ್ರಮಣಿಕೆ

I

# ಐವರಿಗೊಬ್ಬ

ಜಗತ್ತಿನ ಜನತೆಯಲ್ಲಿ ಐವರಿಗೊಬ್ಬ ಭಾರತೀಯ. ಉಳಿದ ನಾಲ್ಕು ಜನರಲ್ಲಿ ಒಬ್ಬ ಅಮೆರಿಕಾದವನು, ಯೂರೋಪಿನವನೊಬ್ಬ, ಒಬ್ಬ ನೀಗ್ರೋ, ಒಬ್ಬ ಚೀನೀ ಎಂದು ಲೆಕ್ಕ ಹಿಡಿಯುವ. ಇಲ್ಲಿ ನೋಡು; ಅವರನ್ನೆಲ್ಲ ಲೆಕ್ಕ ಎಣಿಸುತ್ತಿದ್ದಾರೆ.




ಇದನ್ನು ನೋಡಿದರೆ ನಿನಗೂ ಒಂದು ಪ್ರಾಮುಖ್ಯತೆಯಿದೆ ಅನಿಸುವದಿಲ್ಲವೆ? ನಾವು ಹಿಂದೀ ಜನ, ಪ್ರಪಂಚದ ಜನಸಂಖ್ಯೆಯಲ್ಲಿ ಹೆಚ್ಚು ಕಡಮೆ ಐದರಲ್ಲಿ ಒಂದು ಪಾಲು; ಚೀನಾ ದೇಶವನ್ನು ಬಿಟ್ಟರೆ ನಮ್ಮ ದೇಶದ ಜನ ಸಂಖ್ಯೆಯೇ ಜಗತ್ತಿನ ಎಲ್ಲ ದೇಶಗಳಿಗಿಂತ ಹೆಚ್ಚಿನದು. ನಿಜವಾಗಿ ಈ ವಿಚಾರ ಆಶ್ಚರ್ಯಕರ, ಅಲ್ಲವೆ? ಅಂದಮೇಲೆ ಪ್ರಪಂಚದ ಪರಿಸ್ಥಿತಿಯನ್ನು ಸರಿಪಡಿಸಿ ಕ್ರಮಗೊಳಿಸುವುದರಲ್ಲಿ ನಾವೂ ಸಮಗೆ ತಕ್ಕಂತೆ ಪಾಲುಗೊಳ್ಳಬೇಕು ಎಂಬ ಹುರುಪು ಉಂಟಾಗದೇನು?

ನಮ್ಮ ದೇಶದ ವಿಸ್ತಾರವಾದರೂ ಎಷ್ಟು! ಎಷ್ಟು ದೊಡ್ಡದು. ಪೂರ್ವ ದಿಂದ ಪಶ್ಚಿಮಕ್ಕೆ ಅಗಲವಾದ ಕಡೆ 2000 ಮೈಲಿ, ಉತ್ತರದಿಂದ ದಕ್ಷಿಣಕ್ಕೆ 2000 ಮೈಲಿ—ಒಟ್ಟು ವಿಸ್ತೀರ್ಣ 20 ಲಕ್ಷ ಚದರಮೈಲಿ. ರಷ್ಯಾ ಒಂದನ್ನು ಮಾತ್ರ ಬಿಟ್ಟರೆ ಹಿಂದುಸ್ಥಾನ ಒಂದೇ ಇಡೀ ಯೂರೋಪು ಖಂಡದಷ್ಟು ದೊಡ್ಡದು. ಮಗ್ಗುಲಲ್ಲಿ ಇರುವ ಪಟವನ್ನು ನೋಡು. ಇದು ಚೆನ್ನಾಗಿ ಗೊತ್ತಾಗುತ್ತದೆ.

ಹಿಂದುಸ್ಥಾನದಲ್ಲಿ ಸಾಧಾರಣವಾದ ಒಂದು ಜಿಲ್ಲೆಯ ವಿಸ್ತೀರ್ಣ 4000 ಚದರಮೈಲಿ. ಕೆಲವು ಜಿಲ್ಲೆ ಯೂರೋಪಿನ ಒಂದೊಂದು ಇಡೀ ರಾಷ್ಟ್ರದಷ್ಟು ವಿಸ್ತಾರವಾಗಿವೆ. ಮದರಾಸು ಪ್ರಾಂತದ ವಿಶಾಖಪಟ್ಟಣ ಜಿಲ್ಲೆ ಜನಸಂಖ್ಯೆ ಯಲ್ಲಿಯೂ ವಿಸ್ತೀರ್ಣದಲ್ಲಿಯೂ ಡೆನ್‌ಮಾರ್ಕಿಗಿಂತ ದೊಡ್ಡದು. ಬಂಗಾಲ ಪ್ರಾಂತದ ಮೆಮನ್‌ಸಿಂಗ್ ಜಿಲ್ಲೆಯಲ್ಲಿ ಸ್ವಿಟ್ಸರ್ಲೆಂಡ್ ದೇಶದಲ್ಲಿರುವದಕ್ಕಿಂತ ಹೆಚ್ಚು ಜನ ಇದಾರೆ. ಬಿಹಾರ್ ಪ್ರಾಂತದ ತಿರ್‌ಹುಟ್ ಭಾಗದಲ್ಲಿ ಇರುವಷ್ಟು ಜನ ಇಡೀ ಕೆನಡಾ ದೇಶದಲ್ಲಿಯೆ ಇಲ್ಲ!

ಇದನ್ನೆಲ್ಲ ನಾವು ನೆನಪುಮಾಡಿಕೊಳ್ಳಬೇಕು. ಹಾಗೆ ಮಾಡಲು ಕಾರಣ ವಿದೆ. ನಮ್ಮ ಇತಿಹಾಸದ ಪುಸ್ತಕಗಳಲ್ಲಿ ಎಷ್ಟೋ ಸಣ್ಣಪುಟ್ಟ ದೇಶಗಳು ಬಹಳ ಹೆಚ್ಚು ಸ್ಥಳ ಹಿಡಿದುಕೊಂಡಿವೆ. ನಮ್ಮ ವರ್ತಮಾನ ಪತ್ರಿಕೆಗಳಲ್ಲಿಯೂ ಅಷ್ಟೆ. ಇವಕ್ಕೆ ಬಹಳ ಗಮನ ಸಿಗುತ್ತದೆ. ನಿಮ್ಮ ಶಾಲೆಯ ಭೂಪಟಗಳಲ್ಲಿ ಕೂಡ ಪ್ರಪಂಚದ ನಕಾಸೆಯಲ್ಲಿ ನಮ್ಮ ದೇಶದ ಬಗ್ಗೆ ಈ ವಿಷಮದೃಷ್ಟಿ—ಬೇಕೆಂದು ಯಾರೂ ಈ ಪಕ್ಷಪಾತ ಮಾಡಿರಲಾರರು!—ಕಾಣುತ್ತದೆ. ಒಂದು ನಕಾಸೆ ಯಲ್ಲಂತೂ ಹಿಂದುಸ್ಥಾನವನ್ನೂ ಇಂಗ್ಲೆಂಡನ್ನೂ ಹೋಲಿಸಿ ನೋಡಿದರೆ ಹಿಂದು ಸ್ಥಾನ ನಿಜವಾಗಿ ಎಷ್ಟು ದೊಡ್ಡದಾಗಿ ಕಾಣಬೇಕೋ ಅದರಲ್ಲಿ **ಅರ್ಧದಷ್ಟೆ** ಕಾಣುವ ಹಾಗೆ ಬರೆದಿದಾರೆ ಗೊತ್ತೆ ?

ಬರಿಯ ವಿಸ್ತೀರ್ಣ ವೈಶಾಲ್ಯ ಇದ್ದರೆ ಆಯಿತೆ? ಅದೇನು ಅಂಥ ವಿಶೇಷ ವಲ್ಲ. ಆ ವೈಶಾಲ್ಯವನ್ನು ನಾವು ಹೇಗೆ ಉಪಯೋಗಿಸಿಕೊಳ್ಳುತ್ತೇವೆ ಎಂಬುದೇ ಮುಖ್ಯ ವಿಷಯ. ಈ ವೈಶಾಲ್ಯದಿಂದ ಅನುಕೂಲವೂ ಇದೆ, ಅನನುಕೂಲವೂ

ಇದೆ. ಇದರಿಂದ ನಮ್ಮ ಸಮಸ್ಯೆಗಳೂ ದೊಡ್ಡವಾಗುತ್ತವೆ, ನಮ್ಮ ತೊಂದರೆಗಳೂ ದೊಡ್ಡವಾಗುತ್ತವೆ. ಆದರೆ ಅದರಲ್ಲಿ ಒಂದು ಅನುಕೂಲವೂ ಇದೆ. ನಾವು ಮಾಡಬೇಕಾದುದನ್ನೆಲ್ಲ ದೊಡ್ಡ ತರದಲ್ಲಿ ಮಹತ್ತಾದ ರೀತಿಯಲ್ಲಿ ಮಾಡಲು ನಮಗೆ ಅವಕಾಶವಾಗುತ್ತದೆ.

ಹಿಂದೀಜನ ನಾವು ದೊಡ್ಡ ಜಾಗೀರದಾರ ಇದ್ದಹಾಗೆ. ಆದರೆ ನಮ್ಮ ಜಾಗೀರು ಎಲ್ಲಿದೆ ಹೇಗಿದೆ ಎಂಬುದನ್ನು ತಿಳಿದುಕೊಳ್ಳಬೇಡವೆ? ನೆರೆಹೊರೆಯ ಜಾಗೀರುಗಳಿಗೂ ನಮ್ಮದಕ್ಕೂ ನಡುವೆ ಸರಿಯಾಗಿ ಗುರುತು ಹಾಕಿದ ಮೇರೆಗಳು ಇವೆಯೋ ಇಲ್ಲವೋ? ಹೆದ್ದಾರಿಯಿಂದ ಅದಕ್ಕೆ ಹೋಗಬಹುದೋ ಇಲ್ಲವೆ ಸುತ್ತುಸುತ್ತಾದ ಕತ್ತಲೆ ತುಂಬಿದ ಸಂದಿಗೊಂದಿಗಳಲ್ಲಿ ಹೋಗಬೇಕೋ?

ಹಿಂದುಸ್ಥಾನಕ್ಕೆ ನೈಸರ್ಗಿಕವಾದ ಮೇರೆಗಳ ಮೂಲಕ ಪ್ರಕೃತಿ ಕೊಟ್ಟಿರುವಷ್ಟು ಭದ್ರತೆ ರಕ್ಷಣೆ ಬೇರೆ ಯಾವ ದೊಡ್ಡದೇಶಕ್ಕೂ ಇಲ್ಲವೆಂದೇ ಅನ್ನಬೇಕು. ಮೂಡಲು, ಪಡುವಲು, ತೆಂಕಣ ದಿಕ್ಕುಗಳು ಮೂರರಲ್ಲೂ ವಿಶಾಲವಾದ ನೀಲಸಮುದ್ರ. ಉತ್ತರಕ್ಕೆ ಸುಮಾರಾಗಿ ನಮ್ಮ ಎಲ್ಲೆಕಟ್ಟಿಗೆ ಹೊಂದಿಕೊಂಡು ಉದ್ದಕ್ಕೂ ಹಬ್ಬಿರುವ ಹಿಮಾಲಯಪರ್ವತಕ್ಕಿಂತ ಬಲವಾದ 'ಸೀಗ್‌ಫ್ರೀಡ್' ಕೋಟೆ ಇನ್ನೊಂದು ಉಂಟೆ?

ಇಷ್ಟು ಪ್ರತ್ಯೇಕವಾಗಿಯೂ ಸುಭದ್ರವಾಗಿಯೂ ಇದ್ದರೂ ನಮಗೆ ಮಿಕ್ಕ ಜಗತ್ತಿನೊಡನೆ ಸಂಬಂಧವಿಲ್ಲದೆ ಇಲ್ಲ. ಬೇಕಾದ ಹಾಗೆ ಇದೆ. ಪೃಥ್ವಿಯ ಹೆದ್ದಾರಿಯ ನಡುವೆ ಸರಿಯಾಗಿ ಇದೆ ನಮ್ಮ ದೇಶ. ಯೂರೋಪು, ಆಫ್ರಿಕಾಗಳಿಂದ ಚೀನಾ, ಜಪಾನ್, ಆಸ್ಟ್ರೇಲಿಯಾಗಳಿಗೆ ಹೋಗುವ ಮುಖ್ಯವಾದ ಸಮುದ್ರ ವ್ಯಾಪಾರದ ನೌಕಾಮಾರ್ಗದ ಮೇಲೆಯೆ ಇದೆ ಹಿಂದುಸ್ಥಾನ. ಚೀನಾ, ಜಪಾನ್, ತಾಯಿಲೆಂಡ್ (ಸಯಾಂ), ಮಲಯಾಗಳೊಡನೆಯೂ ಆಸ್ಟ್ರೇಲಿಯಾ, ನ್ಯೂಜಿಲೆಂಡ್‌ಗಳೊಡನೆಯೂ, ಇತ್ತ ಪೂರ್ವ ಆಫ್ರಿಕ, ದಕ್ಷಿಣ ಆಫ್ರಿಕಗಳೊಡನೆಯೂ, ಅತ್ತ ಯೂರೋಪು, ಲೆವಂಟ್‌ಗಳೊಡನೆಯೂ, ರಷ್ಯಾ, ಇರಾನ್, ಇರಾಕ್, ಆಫಘನಿಸ್ಥಾನಗಳೊಡನೆಯೂ ಹಿಂದುಸ್ಥಾನದ ವ್ಯಾಪಾರ ಅಷ್ಟೇ ಸುಲಭವಾಗಿ ನಡೆಯಬಲ್ಲದು.



ಪೂರ್ವ ಖಂಡಕ್ಕೆ ವಿಮಾನಮಾರ್ಗ
ಕರಾಚಿ
ಯೂರೋಪಿಗೆ
ಮುಂಬಯಿ
ಆಫ್ರಿಕಾಕ್ಕೆ
ಕಲಕತ್ತ
ಮದರಾಸು
ಜಪಾನಿನ ಕಡೆ
ಕೊಲೊಂಬೊ
ಆಸ್ಟ್ರೇಲಿಯಾಕ್ಕೆ

ನಮ್ಮ ನಾಡಿನ ಒಳಗೆ ನೋಡುವ. ನಮ್ಮ ಸರಹದ್ದುಗಳ ನಡುವೆ ಇರುವ ಈ ನಾಡು ಎಂಥದು? ಹೇಗಿದೆ? ನೆಲದ ಮೇಲಿನ ಮಣ್ಣನ್ನೂ ಅದರ ಕೆಳಗೆ ಇರುವುದನ್ನೂ ಪರೀಕ್ಷಿಸಿ ಸಿದ್ಧಾಂತಕಟ್ಟುವ ಶಾಸ್ತ್ರಜ್ಞರು ಹಿಂದುಸ್ಥಾನದಲ್ಲಿ ಸ್ಪಷ್ಟವಾಗಿ ಕಾಣುವ ಮೂರು ಬೇರೆ ಬೇರೆ ಭಾಗಗಳಿವೆ ಎನ್ನುತ್ತಾರೆ. ಮೊದಲಿಗೆ ದಕ್ಷಿಣದಲ್ಲಿ ದ್ವೀಪಕಲ್ಪದ ತ್ರಿಕೋಣಾಕಾರದ ಒಂದು ತಪ್ಪಲು ಸೀಮೆ. ಇದು ಹಿಂದುಸ್ಥಾನದ ಅತಿ ಪ್ರಾಚೀನ ಭಾಗ. ತುಂಬ ಕಲ್ಲುಗುಡ್ಡಗಳ ಪ್ರದೇಶ. ಕಾಠೆಯವಾಡದಿಂದ ಪೂರ್ವಕ್ಕೆ ಹಬ್ಬಿಹೋಗುವ ವಿಂಧ್ಯ ಮತ್ತು ಸಾತ್ಪುರ ಬೆಟ್ಟಗಳ ಗುಂಪು ಹಿಂದುಸ್ಥಾನದ ಉಳಿದ ಭಾಗದಿಂದ ಈ ಪ್ರದೇಶವನ್ನು ಪ್ರತ್ಯೇಕವಾಗಿ ಒಡೆದಹಾಗೆ ಮಾಡುತ್ತವೆ. ಇನ್ನು ಉತ್ತರದಲ್ಲಿ ಹಿಮಾಲಯದ ಪರ್ವತ ಪ್ರಾಂತವಿದೆ. ಇಡೀ ಜಗತ್ತಿಗೇ ಪರ್ವತಗಳಲ್ಲಿ ಉನ್ನತೋನ್ನತವಾದುದು ಹಿಮಾಲಯ. ಹಿಮಾಲಯವು ಇನ್ನೂ ಬೆಳೆಯುತ್ತಲೇ ಇದೆ—ಮೇಲಕ್ಕೆ ಏಳುತ್ತಲೇ ಇದೆ ಎಂದು ತಿಳಿಯುವ ಪಂಡಿತರೂ ಇದಾರೆ! ಬಿಹಾರದಲ್ಲಿ ಆದ ಹಾಗೆ ಈ ಪ್ರಾಂತದಲ್ಲಿ ಆಗುವ ಭೂಕಂಪಗಳಿಗೆ ಹಿಮಾಲಯದ ಆ ಬೆಳವಣಿಗೆಯೇ ಕಾರಣ ಎಂದು ಅವರು ಹೇಳುತ್ತಾರೆ.

ಇವೆರಡು ಭಾಗಗಳ ನಡುವೆ ಇರುವ ಮೂರನೆಯ ಭಾಗ—ಪಡುವಲಿಗೆ ಸಿಂಧುನದಿಯ ಕಣಿವೆಕೊಳ್ಳಗಳಿಂದ ಮೂಡಲಿಗೆ ಬ್ರಹ್ಮಪುತ್ರ ನದಿಯ ಕೊಳ್ಳಗಳ ವರೆಗೆ ವಿಸ್ತಾರವಾಗಿ ಹರಡಿಕೊಂಡಿರುವ—ಸಿಂಧು ಗಂಗಾ ಮೈದಾನ. ಈ ಮೈದಾನದ ನೆಲ ಬೇಸಾಯಕ್ಕೆ ಬಹಳ ಉತ್ಕೃಷ್ಟವಾದುದು, ಸಾರವಂತವಾದುದು. ನಮ್ಮ ದೇಶದಲ್ಲಿ ಇದೇ ತೀರ ಹೊಚ್ಚಹೊಸ ಭಾಗ. ಬಹಳ ಕಾಲದ ವರೆಗೆ ಈ ಭಾಗವೆಲ್ಲ ನೀರಿನಲ್ಲಿ ಮುಳುಗಿದ್ದು ಆ ಕಾಲಕ್ಕೆ ಈ ದ್ವೀಪಕಲ್ಪ ಒಂದು ದ್ವೀಪವಾಗಿತ್ತು. ಇಲ್ಲಿ ಸಮುದ್ರ ಆಳವಾಗಿರಲಿಲ್ಲ. ಸಮುದ್ರದ ತಳ ಮೇಲೆಯೆ ಇತ್ತು. ಇತ್ತ ಉತ್ತರದ ಮಹಾನದಿಗಳು ಹಿಮಾಲಯವನ್ನು ಕೊರೆದು ಮಣ್ಣನ್ನು ಹೆರೆದು ಕೊಳ್ಳಗಳಲ್ಲಿ ಧುಮುಕಿ ಈ ಶಾಂತವಾದ ಒಳಗಡಲಿಗೆ ಆ ಮಣ್ಣನ್ನು ತಂದುಹಾಕಿದವು. ನಿಧಾನವಾಗಿ, ಬಹಳ ನಿಧಾನವಾಗಿ ಸಮುದ್ರದ ತಳ ಮೇಲೆ ಏರಿಬಂತು. ಅಲ್ಲಿ ಈ ನದಿಗಳಿಗೆ ತಾವು ಹೊತ್ತುತಂದ ಮಣ್ಣು

ಹಾಕಲು ಬಿಡುವು ಇಲ್ಲದೆ ಮುಂದೆ ಸಾಗಿಹೋಗಬೇಕಾಯಿತು. ಹೀಗೆ ಸಿಂಧು ಗಂಗಾ ಮೈದಾನವು ನಿರ್ಮಾಣವಾಯಿತು. ಭಾರತದ್ವೀಪಕಲ್ಪ ದ್ವೀಪವಾಗಿ ಉಳಿಯಲಿಲ್ಲ. ನಡುವಿನ ತಗ್ಗು ತುಂಬಿ ಇಡೀ ಜಗತ್ತಿನಲ್ಲಿಯೆ ಅತಿ ಸಾರವಂತ ವಾದ ಪ್ರದೇಶವೊಂದು ದಕ್ಷಿಣ ಹಿಂದುಸ್ಥಾನದ ದ್ವೀಪಕಲ್ಪವನ್ನೂ ಏಷಿಯಾ ಪರ್ವತ ಪಂಗ್ತಿಯನ್ನೂ ಕೂಡಿಸಿಬಿಟ್ಟಿತು.

ನಮ್ಮ ದೇಶದ ಮೇಲೆ ಹಿಮಾಲಯದ ಪರಿಣಾಮ ಬಹಳ. ನಮ್ಮ ನಾಡಿನ ವಾಯುಗುಣಕ್ಕೂ ಭೂಗುಣಕ್ಕೂ ಹಿಮಾಲಯ ಮುಖ್ಯಕಾರಣ. ಮಧ್ಯ ಏಷಿಯಾ ಪ್ರದೇಶದ ಗಾಳಿಯ ಹೊಡೆತವನ್ನು ತಡೆದು ಅಲ್ಲಿನಂತೆ ಇಲ್ಲಿಯೂ ದೇಶವು ಮರಳುಗಾಡಾಗದ ಹಾಗೆ ಕಾಪಾಡಿದೆ. ಇಲ್ಲದಿದ್ದರೆ ಆ ಭವಣೆ ಇಲ್ಲಿಗೂ ಬರುತ್ತಿತ್ತು. ಇದಕ್ಕಾಗಿ ನಾವು ಈ ಪರ್ವತಗಳ ಮೈತ್ರೀಭಾವಕ್ಕೆ ಕೃತಜ್ಞರಾಗಿರಬೇಕು. ನಮ್ಮ ನಾಡಿನ ಹವೆ ಇಷ್ಟು ಸುಖಕರವಾಗಿರುವುದು ಅದರಿಂದಲೇ. ಒಬ್ಬ ಇಂಗ್ಲೀಷು ಸಜ್ಜನ ನಮ್ಮ ನಾಡಿನ ಹವೆಯನ್ನು ವರ್ಣಿ ಸುತ್ತಾ **ನಾಡಿಗೆ ನಾಡೇ ಕೆಲವುಕಾಲ, ಕೆಲವು** ಪ್ರಾಂತವಂತೂ **ಸದಾಕಾಲ** ಆನಂದಕರವೆಂದು ಹೇಳಿದಾನೆ.

ಇನ್ನೊಂದು ವಿಷಯ; ಹಿಂದುಸ್ಥಾನದ ದೊಡ್ಡ ದೊಡ್ಡ ನದಿಗಳೆಲ್ಲ ಎಲ್ಲಿ ಹುಟ್ಟುತ್ತವೆ ಗೊತ್ತೆ? ಅದೇ ಹಿಮಾಲಯದಲ್ಲಿಯೆ! ಉತ್ತರ ಹಿಂದುಸ್ಥಾನಕ್ಕೆಲ್ಲ ನೀರು ಕೊಟ್ಟು, ಹೊಲಗಳಿಗೆ ನೀರು ಹರಿಯಿಸಿ, ಪದಾರ್ಥಗಳನ್ನು ಸಾಗಿಸಲು ಹಾದಿಮಾಡಿರುವ ಸಿಂಧು, ಗಂಗ, ಬ್ರಹ್ಮಪುತ್ರ ನದಿಗಳ ತಲೆಮೂಡು ಹಿಮಾಲಯದ ಇಳಿಜಾರಿನಲ್ಲಿಯೇ. ಇನ್ನೂ ಈ ನದಿಗಳು ಮೇಲಿಂದ ಕೆಸರನ್ನು ತಂದು ನೆಲದ ಮೇಲೆ ಹಾಕುತ್ತಲೇ ಇವೆ, ಭೂಮಿಯನ್ನೂ ಸಾರವತ್ತಾಗಿ ಮಾಡುತ್ತಲೇ ಇವೆ.

ಈ ದೊಡ್ಡ ನದಿಗಳು ಗುಡ್ಡದಿಂದ ಕಡಲಿಗೆ ಸದಾ ಅಖಂಡವಾಗಿ ಹರಿಯ ಬೇಕಷ್ಟೆ. ಇದಕ್ಕೆ ಪ್ರಕೃತಿಯು ನಮಗಾಗಿ ಅಲ್ಲಾವುದ್ದೀನನ ಯಕ್ಷಿಣೀ ದ್ವೀಪದ ಭೇತಾಳನಂಥ ಒಂದು ಅದ್ಭುತವಾದ ಮಾಟವನ್ನು ಮಾಡಿದೆ. ನಮ್ಮ ಹಳೆಯ ಗೆಳೆಯ ಕಾರುಮಳೆಯೇ (ಮನ್‌ಸೂನ್ ಮಳೆ) ಆ ಭೇತಾಳ. ಮುಂದಿನ ಪುಟದ ಚಿತ್ರದಲ್ಲಿ ಅವನು ಮಾಡುತ್ತಿರುವ ಕೆಲಸವನ್ನು ನೋಡು. ಸೂರ್ಯನ




ಬೇಗೆ, ಮೋಡಗಳು, ಗಾಳಿಮಳೆ—ಇವುಗಳ ಸಹಾಯದಿಂದ ಪ್ರತಿವರ್ಷವೂ ಕಡಲಿನಿಂದ ಲೆಕ್ಕವಿಲ್ಲದಷ್ಟು ನೀರನ್ನು ಹೊತ್ತು ತಂದು ಮತ್ತೆ ಗುಡ್ಡಗಳ ತಲೆಯಮೇಲೆ ಸುರಿಯುತ್ತಾನೆ. ಬಣಗಿಹೋದ ಮೈದಾನಗಳಿಗೂ ನೀರು ಹುಯ್ಯುತ್ತಾನೆ.

ಇದಾದ ಮೇಲೆ ಹಿಂದುಸ್ಥಾನದ ಮುಖ್ಯವಾದ ಎರಡನೆಯ ವೈಚಿತ್ರ್ಯ ಇಲ್ಲಿನ ವಾಯುಗುಣದ ವಿಶೇಷ ವೈವಿಧ್ಯ; ಜನರಲ್ಲಿ, ಭೂಮಿಯಲ್ಲಿ ಕಾಣುವ ಬೇರೆ ಬೇರೆ ರೀತಿ ಪ್ರಕಾರಗಳು. ಇದು ಸಹಜ. ಕನ್ಯಾಕುಮಾರಿ ಭೂಮಧ್ಯರೇಖೆಗೆ

8 ಡಿಗ್ರಿ ಮಾತ್ರ ಉತ್ತರಕ್ಕೆ ಇದ್ದರೆ ಕಾಶ್ಮೀರದಲ್ಲಿನ ಗಿಲ್ಗಿಟ್ 34 ಡಿಗ್ರಿ ಉತ್ತರ. ಪ್ರಪಂಚದಲ್ಲಿರುವ ಎಲ್ಲ ತರದ ಹವಾಮಾನವೂ ಹಿಂದುಸ್ತಾನದಲ್ಲಿದೆ. ಆಫ್ರಿಕಾ ಖಂಡದ ಅತ್ಯುಷ್ಣ ಪ್ರದೇಶಗಳಷ್ಟು ಬಿಸಿಲು ಬೇಗೆಯೂ ತಗ್ಗಾದ ಮೈದಾನ ಪ್ರದೇಶಗಳಲ್ಲಿದೆ; ಸಿಂಧ್ ಪ್ರಾಂತದ ಜಾಕೊಬಾಬಾದಿನಲ್ಲಿ ಬೇಸಿಗೆಕಾಲದ ನೆರಳಿನಲ್ಲಿ 125 ಡಿಗ್ರಿ; ಶೀತವಲಯದಲ್ಲಿದ್ದ ಹಾಗೆ ಹೆಪ್ಪುಗಟ್ಟಿಹೋಗುವ ಡಿಗ್ರಿಯೂ ಹಿಮಾಲಯ ಪ್ರಾಂತದಲ್ಲಿದೆ. ಅಸಾಂ ಪ್ರಾಂತದ ಚಿರಾಪುಂಜಿಯಲ್ಲಿ ವರ್ಷಕ್ಕೆ 460 ಇಂಚು ಮಳೆಯಾದರೆ ಉತ್ತರ ಸಿಂಧ್‌ಗೆ ಮೂರೇ ಅಂಗುಲ ಮಳೆ. ಸಾಧಾರಣವಾಗಿ ವರ್ಷಕ್ಕೆ ಎಂಟು ತಿಂಗಳು ಒಂದು ಹನಿಯೂ ಕಾಣದ ಶುಷ್ಕಕಾಲ, ನಾಲ್ಕು ತಿಂಗಳು ಸದಾ ಮಳೆ. ಏನು ಬೇಕಾದರೂ ಬೆಳೆಯುವ ಹುಲುಸಾದ ಸಿಂಧು ಗಂಗಾ ಮೈದಾನದಂಥ ಪ್ರದೇಶ ನಮಗಿದೆ. ದ್ವೀಪಕಲ್ಪದ ಸಮುದ್ರತೀರದಲ್ಲಿ ಯಥೇಷ್ಟವಾಗಿ ಬೆಳೆದ ಅರಣ್ಯಸಮೃದ್ಧಿಯ ಮಲಬಾರು ಪ್ರಾಂತವೂ ಇದೆ. ಇವುಗಳ ಜೊತೆಗೆ ರಾಜಪುತಾನ, ಸಿಂಧ್, ಕಚ್‌ಗಳ ಮರಳುಗಾಡುಗಳೂ ಇವೆ.

ಯಾರ ಮೋರೆಯನ್ನಾದರೂ ನೋಡಿ ‘ಯಾಕೋ ಅವನ ಮುಖ ನೋಡಿದರೆ ಅಸಹ್ಯವಾಗುತ್ತದೆ’ ಎನ್ನುವದಿಲ್ಲವೆ ನಾವು. ಎಷ್ಟೋಸಲ ಹಾಗೆಯೇ ‘ಮುಖ ನೋಡಿದರೆ ಚಲೋ ಮನುಷ್ಯನ ಹಾಗೆ ಕಾಣುತ್ತಾನೆ’ ಎಂದೂ ಅನ್ನುತ್ತೇವೆ. ಏಕೆ? ಅಂಥ ಮೋರೆಯ ಮನುಷ್ಯ ಚಲೋ ಆಗಿರುವುದು ಅಶಕ್ಯ, ಇಂಥ ಕಣ್ಣಿನ ಕಳೆಯ ಈ ಮನುಷ್ಯ ಬಹಳ ಚಲೋ ಇರಲಿಕ್ಕೇ ಬೇಕು ಎಂದು ನಮಗೆ ಸಹಜವಾಗಿಯೇ ಅನಿಸುತ್ತದೆ. ಅನೇಕಸಲ ನಮಗೆ ಅನಿಸಿದ್ದು ನಿಜವೇ ಸರಿ. ಕೆಲವುವೇಳೆ ತಪ್ಪಾದರೂ ಆದೀತು. ಸಾಧಾರಣವಾಗಿ ಮನುಷ್ಯನ ಸ್ವಭಾವ,



ಗುಣ ಅವನ ಮೋರೆಯ ಮೇಲೆ, ಮಾತಿನಲ್ಲಿ ತಿಳಿಯುತ್ತದೆ. ದೇಶಕ್ಕೆ ಭೂಮಿ, ಹವೆ, ಗುಡ್ಡ, ಹೊಳೆ ಮುಖವಿದ್ದ ಹಾಗೆ. ಜನ ಅದರ ಮನಸ್ಸು, ಆತ್ಮ. ಆದರೆ ನಮ್ಮ ದೇಶಕ್ಕೆ ಈಗಿನ ಆಕಾರ, ಸ್ಥಿತಿ ಬಂದ ಬಹಳ ದಿನಗಳ ತರುವಾಯ ಜನ ಬಂದು ನೆಲಸಿದುದರಿಂದ ಆ ಸಿದ್ಧಾಂತ ತಿರುವುಮುರು ವಾಗಿದೆ. ಹಿಂದುಸ್ಥಾನದ ಮೋರೆ ಅದರ ಮನಸ್ಸಿನಲ್ಲಿ, ಆತ್ಮದಲ್ಲಿ ಕಾಣುತ್ತದೆ.



ಅಂತೆಯೆ ಹಿಂದುಸ್ಥಾನದ ನಿಸರ್ಗ ವೈವಿಧ್ಯದ ಸಂತೆ ಇಲ್ಲಿ ಬಾಳುವ ಜನರಲ್ಲಿ ಒಡಮೂಡಿ ಕಾಣುತ್ತದೆ. ಹಿಟ್ಲರನ ಆರ್ಯರಲ್ಲಿ ತುಂಬ ಚೆಲುವರಾದವರ ಚೆಲುವೂ ನಮ್ಮಲ್ಲಿದೆ. ಆಫ್ರಿಕಾದ ನೀಗ್ರೋಗಳ ಕಾಡಿಗೆಗಪ್ಪೂ ಇದೆ. ಭಾರತೀಯನು ಆಜಾನುಬಾಹುವಾಗಿ ಉನ್ನತ ದೇಹಿಯೂ ಹೌದು. ಆಸ್ಟ್ರೇಲಿಯದ ಗುಡ್ಡಗಾಡಿನ ಜನರ ಹಾಗೆ ಗಿಡ್ಡಗೆ ದಪ್ಪಗೂ ಹೌದು. ನಮ್ಮಲ್ಲಿ ದೃಢದೇಹಿಯಾದ ಧೀರನೂ



ಉಂಟು. ಸೀರ ಸಿಪ್ಪಾಡಿಯಾದ ದುರ್ಬಲನೂ ಉಂಟು. **ಈ** ಚಿತ್ರದಲ್ಲಿದ್ದ ಹಾಗೂ ಸರಿ. ಆ ಚಿತ್ರದಲ್ಲಿದ್ದ ಹಾಗೂ ಸರಿ. ಈ 1941 ನೆಯ ಇಸವಿ ಯಲ್ಲಿಯೂ ಇರುವಿಕೆಯಲ್ಲಿ ವಿಚಾರದಲ್ಲಿ 5 ನೆಯ ಶತಮಾನದಿಂದ 20 ನೆಯ ಶತಮಾನದವರೆಗೂ ಪ್ರತಿಯೊಂದು ಶತಮಾನದ ರೀತಿಯ ಜನರೂ ಸಿಗುತ್ತಾರೆ. ರಷ್ಯಾದ ಹೊರತು ಜಗತ್ತಿನಲ್ಲಿ ಎಲ್ಲಿಯೂ ಮನುಷ್ಯರಲ್ಲಿ ಇಷ್ಟು ವಿವಿಧತೆ ಕಾಣದು.

ಚೀನಾದ ತರುವಾಯ ನಮ್ಮ ಜನಸಂಖ್ಯೆಯೇ ಹೆಚ್ಚು ಜಗತ್ತಿಗೆಲ್ಲ. 40 ಕೋಟಿ ಜನ. ಈ ಅಗಾಧ ಜನಸಂಖ್ಯೆ ಎಂದರೆ ಎಂಥ ಅಂಗಬಲ! ಎಷ್ಟು ಆಳುಬಲ!

ನಾವು ಇಷ್ಟು ಬಹಳ ಜನ ಇರುವುದೂ ನಮ್ಮಲ್ಲಿ ಇಷ್ಟು ಬೇರೆ ಬೇರೆ ತೆರಗಳು ಇರುವುದೂ ನಾವೆಲ್ಲ ಒಟ್ಟಿಗೆ ಸುಖವಾಗಿ ಇರಲು ಅನೇಕ ತೊಂದರೆ

ಗಳನ್ನು ತರಬಹುದು, ತರುತ್ತಿದೆ. ಅದಿರಲಿ. ನಾವೆಲ್ಲರೂ ಎಂದರೆ ಎಂಥ ಅದ್ಭುತ ಶಕ್ತಿ, ಎಷ್ಟು ಸಾಮರ್ಥ್ಯ, ಅಲ್ಲವೆ?



ಜನರಿಗೆ ಅನ್ನ, ಅರಿವೆ, ಮನೆ ಮೊದಲಾದವು ಬೇಕು. ಇದನ್ನು ಒದಗಿಸಿಕೊಳ್ಳುವದರಲ್ಲಿ ತಲಾ ಒಂದು ಕೆಲಸ ಹಂಚಿಕೊಂಡು ತಮ್ಮೊಳಗೆಯೆ ಶ್ರಮ ವಿಭಾಗಮಾಡಿ ಜನ ಪ್ರಗತಿಗೊಂಡಿದಾರೆ. ನಿಮ್ಮ ತಂದೆ ತಾನು ತಿನ್ನುವದನ್ನೆಲ್ಲ ತಾನೇ ಬೆಳೆದು, ತಾನು ಬಳಸುವ ವಸ್ತುಗಳನ್ನೆಲ್ಲ ತಾನೇ ಮಾಡುತ್ತಾರೆಯೆ? ಇಲ್ಲ. ಧಾನ್ಯ ದವಸ ಬೆಳೆವುದರಲ್ಲಿ ಒಕ್ಕಲಿಗನಿಗೆ ತುಂಬ ಅನುಭವವಿದೆ. ನಿಮ್ಮ ತಂದೆ ಜಾಣರು. ಆ ಒಕ್ಕಲಿಗನ ಅನುಭವದಿಂದ ತಾವು ಲಾಭಮಾಡಿಕೊಳ್ಳುತ್ತಾರೆ. ಹಾಗೆಯೆ ಅರಿವೆ ನೇಯುವವರ, ಎಕ್ಕಡ ಹೊಲಿಯುವವರ, ಕ್ಷೌರದ ಕತ್ತಿ ಮಾಡುವವರ ಜಾಣತನವನ್ನೂ ಉಪಯೋಗಮಾಡಿಕೊಳ್ಳುತ್ತಾರೆ. ಎಷ್ಟೇ ಜಾಣರಾಗಿರಲಿ ಇವನ್ನೆಲ್ಲ ತಾವೇ ಮಾಡಿಕೊಳ್ಳುತ್ತೇವೆ ಎಂದು ಹೊರಟರೆ

ಸಾಧ್ಯವೇ? ಇಲ್ಲ, ಯಾರಿಗೂ ಸಾಧ್ಯವಲ್ಲ. ನಮ್ಮಲ್ಲಿ ಅತಿ ಜಾಣ, ಅತಿ ಬಲಶಾಲಿ ಅನಿಸಿಕೊಂಡವನಿಗೂ ನಾವು ದಿನಾಲೂ ಬಳಸುವ ಪದಾರ್ಥಗಳಲ್ಲಿ ಇಪ್ಪತ್ತರೊಳಗೆ ಒಂದನ್ನಾದರೂ ಮಾಡಲಿಕ್ಕೆ ಕಲಿಯಲು ಸಾಕಷ್ಟು ಉತ್ಸಾಹ, ವೇಳೆ ಎಲ್ಲಿದೆ? ಯುಗಯುಗಗಳ ಅನುಭವದಿಂದ ಕೆಲಸ ಹಂಚಿಕೊಳ್ಳುವ ಈ ಉಪಾಯ ಕಂಡುಹಿಡಿದು, ನಮ್ಮೊಳಗೆ ಕೆಲವರು ತಿನ್ನಲಿಕ್ಕೆ ಗೋಧಿ, ಭತ್ತ, ಹಣ್ಣು, ಪಲ್ಯಗಳನ್ನು ಹೊಲದಲ್ಲಿ ಬೆಳೆಯುತ್ತಿದೇವೆ; ಕೆಲವರು ಕಾರಖಾನೆಗಳಲ್ಲಿ ಬಟ್ಟೆ, ಮೆಟ್ಟು, 'ಮೋಟಾರು', 'ರೇಡಿಯೋ' ಗಳನ್ನು ಮಾಡುತ್ತಿದಾರೆ. ಇನ್ನೂ ಕೆಲವರು ಮೇಜಿನ ಮುಂದೆ ಕೂತು ಪುಸ್ತಕ ಬರೆಯುತ್ತಿದೇವೆ. ಈಗಿನ ಕಾಲದಲ್ಲಿ ಈ ಹಂಚಿಕೊಳ್ಳುವ ರೀತಿ ಬಹಳವಾಗಿ ಬೆಳೆದುಬಿಟ್ಟಿದೆ. ಒಂದು ಸಣ್ಣ ಅರಿವೆಯ ತುಂಡುಮಾಡಲು ಹತ್ತಾರು ಜನರ ಕೈವಾಡ ಬೇಕು. ಹತ್ತಿ ಬೆಳೆಯುವವನು ಒಬ್ಬ, ಕಾಳು ಬಿಡಿಸುವವನೊಬ್ಬ, ಹಿಂಜುವವನೊಬ್ಬ, ಅದನ್ನು ನೂಲುವವನೊಬ್ಬ, ಆ ನೂಲನ್ನು ನೇಯುವವನು ಒಬ್ಬ, ಆ ಅರಿವೆಯನ್ನು ಕತ್ತರಿಸಿ ಹೊಲಿದುಕೊಡುವವನು ಒಬ್ಬ, ಎಷ್ಟು ಜನ!

ಒಬ್ಬೊಬ್ಬರಿಗೆ ಒಂದೊಂದು ಕೆಲಸದಲ್ಲಿ ಸೂಟಿ, ಜಾಣತನ. ಇದೇ ರೀತಿ ಬೇರೆ ಬೇರೆ ದೇಶದ ಜನಕ್ಕೆ, ಬೇರೆ ಬೇರೆ ಜಾತಿಯ ಜನಕ್ಕೆ, ಅವರವರ ದೇಹಶಕ್ತಿ ಮನೋವೃತ್ತಿಗಳಿಗೆ ತಕ್ಕಂತೆ ಬೇರೆ ಬೇರೆ ಕೆಲಸಗಳಲ್ಲಿ ಕುಶಲತೆ. ಒಂದೊಂದು ಬಗೆಯ ಕೆಲಸ ಅವರಿಗೆ ತುಂಬ ಯೋಗ್ಯ. ಒಂದೊಂದು ಬಗೆಯದು ಅವರಿಗೆ ಅಳವಾಗಲಿಕ್ಕಿಲ್ಲ.

ಒಂದೊಂದು ಬಗೆಯ ಭೂಮಿ ಒಂದೊಂದು ಬಗೆಯ ಪೈರಿಗೆ ಅನುಕೂಲ. ಸೆಕೆ—ಛಳಿ, ಕಾವು—ತಂಪುಗಳ ಪ್ರಕಾರ ಬೇರೆ ಬೇರೆ ಹವೆ ಬೇರೆ ಬೇರೆ ತರದ ಒಕ್ಕಲುತನಕ್ಕೆ, ಬೇರೆ ಬೇರೆ ಉದ್ಯೋಗಕ್ಕೆ ಅನುಕೂಲವಾಗುತ್ತದೆ.

ಇಷ್ಟು ವಿಧವಿಧವಾದ ಜನ, ಎಲ್ಲಾ ತರದ ಹವೆ, ಎಲ್ಲಾ ಪ್ರಕಾರದ ಭೂಗುಣ ಇರುವ ನಮ್ಮ ಈ ಹಿಂದುಸ್ಥಾನ ಎಷ್ಟು ಅದೃಷ್ಟಶಾಲಿ! ಎಷ್ಟು ಐಶ್ವರ್ಯವಂತವಾಗಬೇಡ!

ಹಾಗೆಂದರೆ, ಹಿಂದುಸ್ಥಾನದ ಜನರೆಲ್ಲರಿಗೂ ಬೇಕಾದ ಎಲ್ಲ ಪದಾರ್ಥ

ಗಳನ್ನೂ ಮಾಡಿಕೊಳ್ಳಲು ಏನೇನು ಪದಾರ್ಥಗಳು ಬೇಕೋ ಅವೆಲ್ಲವೂ ಒಂದಲ್ಲ ಒಂದುಕಡೆ ಹಿಂದುಸ್ಥಾನದಲ್ಲಿಯೇ ಇವೆ ಎಂದಹಾಗಾಯಿತು, ಅಲ್ಲವೆ? ಅಂದರೆ, ಹಿಂದುಸ್ಥಾನದ ಜನ ನಾವು ನಮಗೆ ಏನುಬೇಕಾದರೂ ಇಲ್ಲಿ ಬೆಳೆಯಬಹುದು, ಮಾಡಬಹುದು. ಅದೇ ಇಂಗ್ಲೆಂಡಿನಲ್ಲಿ ಹತ್ತಿ, ಅರೇಬಿಯಾದಲ್ಲಿ ಸೇಬು, ಬೆಳೆಯ ಬಹುದೇ? ಬೆಳೆಯಬಹುದೆಂದು ಬರಿಯ ಕಲ್ಪನೆಯಾದರೂ ಮಾಡಲು ಬಂದೀತೆ? ಆದರೆ ಹಿಂದುಸ್ಥಾನದಲ್ಲಿ **ನಮ್ಮ ದೇಶದಲ್ಲೇ ಬೆಳೆದ** ಹತ್ತಿಯೂ ಉಂಟು, ಸೇಬೂ ಉಂಟು.

II

# ಸೂರ್ಯನನ್ನು ತಿನ್ನಬಹುದೆ?

ಕನ್ನಡದ ಕವಿ ಜೈಮಿನಿಭಾರತದ ಲಕ್ಷ್ಮೀಶನ ಹೆಸರು ಕೇಳಿಲ್ಲವೇ ನೀವು? ಗದುಗಿನ ಭಾರತದ ನಾರಣಪ್ಪನ ಬಿರುದು ನಿಮಗೆ ತಿಳಿಯದೆ? ಇವರ ಹಾಗೆಯೆ ಇಂಗ್ಲಿಷು ಭಾಷೆಯಲ್ಲಿ ಮಿಲ್ಟನ್ ಎಂಬ ಒಬ್ಬ ದೊಡ್ಡ ಕವಿಯಿದ್ದ. ಅವನು ಬರೆದ ಮಹಾಕಾವ್ಯ 'ಸ್ವರ್ಗಾಪರೋಹಣ' ಅಥವಾ *Paradise Lost*. ಅದರಲ್ಲಿ 'ಆರಮಸ್ ಮತ್ತು ಇಂಡ್‌ಗಳ ಐಸಿರಿ'ಯ ವಿಷಯವಾಗಿ ಆತ ಹೇಳಿದಾನೆ. ಬಹುಕಾಲದ ಹಿಂದೆಯೇ ಹಿಂದುಸ್ಥಾನದ ಐಶ್ವರ್ಯ ಜಗತ್ಪ್ರಸಿದ್ಧವಾದ ಸುದ್ದಿಯಾಗಿತ್ತು.

ನಮ್ಮ ನಾಡಿನ ಬೆಳ್ಳಿಬಂಗಾರದ, ವಜ್ರವೈಡೂರ್ಯದ, ಕಪ್ಪುರಕಸ್ತೂರಿಯ ಗಂಧಪರಿಮಳದ, ರೇಶಿಮೆಜರತಾರಿಯ ಕತೆಗಳು ದೂರದೂರ ಹರಡಿಕೊಂಡಿದ್ದವು. ಈ ಕತೆಗಳೇ ದೂರದೇಶದ ಜನರ ಮನಸ್ಸಿಗೆ ಪುಟಕೊಟ್ಟು ಅವರು ನಮ್ಮ ಸಂಪತ್ತನ್ನು ಬಯಸುವಂತೆ ಪ್ರಲೋಭನಗೊಳಿಸಿದುದು. ಹಾಗಾದರೆ ಹಿಂದುಸ್ಥಾನದ ಅತುಲೈಶ್ವರ್ಯದ ಅತ್ಯಮೂಲ್ಯವಸ್ತು ಯಾವುದು ಎಂದು ನೀವು ನನ್ನನ್ನು ಕೇಳಬಹುದು. ಆಗಿನ ಕಾಲದಲ್ಲಿ ಯಾವುದಾಗಿತ್ತು, ಈಗ ಯಾವುದು ಎಂದು ಕೇಳಬಹುದು. ಕೇಳಿದರೆ ನಿಮಗೆ ಹೈದರಾಬಾದು ನಿಜಾಮನ ನೆಲಮಾಳಿಗೆಗಳಲ್ಲಿ ಕೂಡಿಸಿಟ್ಟಿರುವ ಬಂಗಾರದ ಗಟ್ಟಿಗಳನ್ನು ನಾನು ತೋರಿಸುವುದಿಲ್ಲ; ನಮ್ಮ ದೇಶದಲ್ಲಿ ಅಂಗಡಿಯಿಟ್ಟಿರುವ, ಕಾರಖಾನೆ ಕಟ್ಟಿರುವ ಕೋಟ್ಯಾಧೀಶರ ಹೆಸರಿನಲ್ಲಿ ಬ್ಯಾಂಕುಗಳಲ್ಲಿರುವ ಹಣವನ್ನೂ ತೋರಿಸುವುದಿಲ್ಲ; ಶ್ರೀಮಂತರ ಮಹಲುಗಳನ್ನಾಗಲಿ ರಾಜಾಧಿರಾಜರ ಅರಮನೆಗಳನ್ನಾಗಲಿ ತೋರಿಸುವುದಿಲ್ಲ. ನಾನು ತೋರಿಸುವುದು ಸೂರ್ಯನನ್ನು, ಭೂಮಿಯನ್ನು,

ನಮ್ಮ ನಾಡಿನ ನದಿಗಳನ್ನು, ಬೆಟ್ಟಗಳನ್ನು, ಮಳೆಯನ್ನು, ಎಲ್ಲಕ್ಕಿಂತ ಮುಖ್ಯ ವಾಗಿ ನಮ್ಮ ದೇಶದಲ್ಲಿ ಬದುಕಿ ಬಾಳುತ್ತಿರುವ ಕೋಟ್ಯಾನುಕೋಟಿ ಗಂಡು ಹೆಣ್ಣು ಮಕ್ಕಳು—ಇವರನ್ನು.

ಈಗಿನ ಕಾಲದ, ಅಂದರೆ ಇಪ್ಪತ್ತನೆಯ ಶತಮಾನದ ವ್ಯವಹಾರಕುಶಲಿ ಗಳಾದ ತರುಣರು ನೀವು ಪ್ರತ್ಯಕ್ಷ ಪ್ರಮಾಣವಲ್ಲದುದನ್ನು ನಂಬಲಾರಿರಿ. ನಾನು ಹೇಳಿದುದನ್ನು ಕೇಳಿ ಅಸಹ್ಯಪಡಲೂ ಬಹುದು. 'ಸೂರ್ಯನನ್ನೇನು ತಿನ್ನಲು ಬಂದೀತೇ? ನದಿಯ ನೀರು ಕುಡಿದುಕೊಂಡು ಗುಡ್ಡಗಳ ಮೇಲೆ ಬದುಕಿಕೊಂಡಿರಲು ಸಾಧ್ಯವೇ?' ಎಂದುಬಿಡುತ್ತೀರಿ ನೀವು ಸೋಜಿಗದಿಂದ. ಹಾಗಾದರೆ ಅದು ಸಾಧ್ಯವಿಲ್ಲವೇನು? ನೀವು ಹಾಗೆ ಮಾಡುತ್ತಾ ಇಲ್ಲವೆಂದು ಅಷ್ಟು ನಂಬಿಗೆಯೇ ನಿಮಗೆ? ನಿಜವಾಗಿಯೂ ನಾವು ಹಾಗೆಯೇ ಮಾಡು ತ್ತಿದೇವೆ ಎನ್ನುವುದಿಲ್ಲ ನಾನು. ಹಾಗೆ ಕೆಲವರು ಸಾಧುಸತ್ಪುರುಷರು ಮಾಡು ವುದೂ ಉಂಟು. ಆದರೆ ವಿಚಾರಮಾಡಿ ನೋಡಿ. ನಾವು ತಿನ್ನುವುದು, ಕುಡಿಯು ವುದು, ನಮ್ಮ ಉಡಿಗೆತೊಡಿಗೆ, ಮನೆಮಾರು ಎಲ್ಲವೂ ಈ ಮೂಲವಸ್ತು ಗಳಿಂದಲೇ ಅಲ್ಲವೆ ನಮಗೆ ಸಿಗುವುದು?

ನೀವು ತಿನ್ನುವ ಕಾಯಿಪಲ್ಯವನ್ನೇ ತೆಗೆದುಕೊಳ್ಳಿರಿ. ಸೂರ್ಯಕಿರಣ, ನೀರು ಮಣ್ಣು ಗಾಳಿಯಲ್ಲದೆ ಮತ್ತೇನದು? ತರಕಾರಿಯಲ್ಲಿ ಹೆಚ್ಚಾದ ಅಂಶ ಯಾವುದು? ಗಾಳಿಯಿಂದ ಇಂಗಾಲಾಮ್ಲವನ್ನೂ ನೆಲದಿಂದ 'ನೈಟ್ರೇಟ್' ಉಪ್ಪನ್ನೂ ಅವು ಪಡೆಯುವುದಿಲ್ಲವೆ? ಎಲ್ಲ ಸಸ್ಯಪದಾರ್ಥದಲ್ಲೂ ಇವೇ ಮುಖ್ಯಾಂಶಗಳು. ಈ ಪದಾರ್ಥಗಳನ್ನು ಆಹಾರವಾಗಿ ಮಾಡುವ ಶಕ್ತಿ ನಮಗೆ ಬರುವುದು ಸೂರ್ಯನ ಬೆಳಕು ಶಾಖಗಳಿಂದ. ನೀವು ತಿನ್ನುವ ಕ್ಯಾಬೇಜಿನ ಉದಾಹರಣೆಯನ್ನೇ ನೋಡಿ. ಅದರಲ್ಲಿ ನೂರಕ್ಕೆ 91·5 ಭಾಗ ನೀರಿದೆ. ನಿಮ ಗಿದು ಗೊತ್ತೇನು?

ಇವು ಉದಾಹರಣೆಗಾಗಿ ಹೇಳಿದೆ. ಇದರ ಮೇಲೆ ನೀವು ವಿಚಾರಮಾಡ ಬೇಕು. ಇವು ನಿಮಗೊಂದು ಪಾಠ ಹೇಳಿಕೊಡಲಿ. ಯಾರಾದರೂ ಉಪಾ ಧ್ಯಾಯರು ದೇಶದ ಸಂಪತ್ತು ಅಂದರೆ ಬ್ಯಾಂಕಿನಲ್ಲಿರುವ ಹಣ ಎಂದು ಹೇಳಿ

ಕೊಟ್ಟಾರು. ಅಂಥದನ್ನು ಹಾಗೆಯೆ ನಂಬದಂತೆ ಈ ದೃಷ್ಟಾಂತಗಳು ಪಾಠ ಹೇಳಿಕೊಡಲಿ. ಅದು ಸರಿಯಲ್ಲ ಎಂದು ನಿಮ್ಮ ಮನಸಿಗೆ ನೀವೇ ಹೇಳಿಕೊಳ್ಳಿ. ಹಿಂದುಸ್ಥಾನದಲ್ಲಿ **ಎಲ್ಲಾ ಕಡೆ** ವರುಷಕ್ಕೆ ಎರಡು ಬೆಳೆ, **ಕೆಲವು ಕಡೆ** ಮೂರು ಬೆಳೆ ತೆಗೆಯಲು ಅನುಕೂಲವಾಗಿ ಸಾಕಷ್ಟು ಬಿಸಿಲೂ ಮಳೆಯೂ ಬೀಳುತ್ತದೆ ಯೆಂಬ ಮಾತನ್ನು ನೆನಪುಮಾಡಿಕೊಳ್ಳಿ. ನೆನಪುಮಾಡಿಕೊಂಡು ಹೆಮ್ಮೆಯಿಂದ ಮರೆಯಾಗಿ ನಗರಿ.

ಈಗ ನಮ್ಮ ನಾಡಿನ ಸಂಪತ್ತಿನ ವಿವರಗಳ ಪಟ್ಟಿಯೊಂದನ್ನು ಮಾಡೋಣ. ನಮ್ಮ ಪಟ್ಟಿ ಸಂಪೂರ್ಣವಾದುದು ಆಗಲಿಕ್ಕಿಲ್ಲ. ವಿದ್ವಾಂಸರಾದ ಪಂಡಿತ ರೆಷ್ಟೋ ಜನ ದೊಡ್ಡ ದೊಡ್ಡ ಪುಸ್ತಕಗಳನ್ನು ಬರೆದಿದಾರೆ ಇಂಥ ಪಟ್ಟಿಯನ್ನು ಮಾಡಲಿಕ್ಕೆ; ಅಷ್ಟಾದರೂ ಆ ಪಟ್ಟಿ ಎಂದೂ ಸಂಪೂರ್ಣವಾಗಿಲ್ಲ. ಆದುದ ರಿಂದ ನಾವೆಷ್ಟು ಐಶ್ವರ್ಯವಂತರೆಂದು ನಾಲ್ಕೆಂಟು ವಿವರಗಳನ್ನೂ ಹಾಕಿ ನೋಡೋಣ. ಅಲ್ಲದೆ ನಮ್ಮಲ್ಲಿ ಅನೇಕರಿಗೆ ಇದು ಗೊತ್ತೇ ಇಲ್ಲದೆ ಸುಮ್ಮನೆಯೆ ನಿಷ್ಕಾರಣವಾಗಿ ನೊಂದುಕೊಂಡು ನಿರಾಶರಾಗುತ್ತಾರೆ.

ನಮ್ಮ ಸಿರಿಯ ಪಟ್ಟಿಯಲ್ಲಿ ಯಾವುದನ್ನು ಪ್ರಾರಂಭಕ್ಕೆ ಹಾಕೋಣ! ನಾವು ನಾಚಿಕೆ ಪಡದೆ **ನಮ್ಮನ್ನೇ** ಮೊದಲಿಗೆ ಲೆಕ್ಕ ಹಿಡಿದುಕೊಳ್ಳಬೇಕು ಎಂದು ನನಗನಿಸುತ್ತದೆ. ಇಂಗ್ಲೆಂಡಿನಲ್ಲಿ ರಸ್ಕಿನ್ ಎಂಬ ಮಹಾವಿಚಾರಶಾಲಿಯೂ ವಿಶ್ವಕುಟುಂಬಿಯೂ ಇದ್ದ. ಇಂಗ್ಲಿಷು ಶಾಲೆಯಲ್ಲಿ ಓದಿದರೆ ಅವನ ಪುಸ್ತಕ *Sesame and Lilies* ನೀವು ಓದಿದರೂ ಓದಬಹುದು. ಬೇಸರಪಡದೆ ಆತ ಪದೇ ಪದೇ ಹೇಳುತ್ತಿದ್ದ. ದೇಶಕ್ಕೆ ಮುಖ್ಯೈಶ್ವರ್ಯ ಆರೋಗ್ಯವಂತರಾದ ಜನ ಎಂದು. ಹೌದು, ಆತ ಹೇಳಿದುದು ಸತ್ಯ.

ಯೋಚಿಸಿನೋಡಿ, ಹಿಂದುಸ್ಥಾನದ 40 ಕೋಟಿ ಜನಸಂಖ್ಯೆ ಎಂದರೆ ಎಂಥ ಅದ್ಭುತ ಶಕ್ತಿ! ಬೇಕಾದುದನ್ನು ಮಾಡಲಿಕ್ಕೆ ಮುಟ್ಟಲಿಕ್ಕೆ ಎಷ್ಟಾಳು ಬಲ ನಮ್ಮದು! ಎಂಥ ದೊಡ್ಡ ಶಕ್ತಿ, ಎಂಥ ಸಾಮರ್ಥ್ಯ!

ಹಿಂದುಸ್ಥಾನದ ಜನರೇನು ಯಾವ ಜನಾಂಗಕ್ಕೂ ಬುದ್ಧಿಯಲ್ಲಿ ಕಡಮೆ ಯಿಲ್ಲ. ಅವರಿಗೆ ಪುರಾತನವಾದೊಂದು ಸಂಸ್ಕೃತಿಯೂ ವೈಭವೋಪೇತವಾದ

ನಾಗರಿಕತೆಯೂ ಇದೆ. ಹೀಗೆ ಹೇಳಿದರೆ ಯಾರಾದರೂ ಇದು ಜಂಬವೆಂದಾರು ಎಂದು ಹೆದರಬೇಕಾಗಿಲ್ಲ. ಇಲ್ಲಿನ ಬಿಸಿಲೂ ಬೇಗೆಯೂ ಕೆಲಸದಲ್ಲಿ ನಿಧಾನ ವನ್ನೂ ಮೈಗೆ ಮಾಂದ್ಯವನ್ನೂ ಉಂಟುಮಾಡುತ್ತದೆ ನಿಜವೇ. ಆದರೆ ಇತರ ದೇಶದ ಜನರೊಡನೆ ಸರಿಸಮವಾಗಿ ಕೆಲಸಮಾಡಲು ಅವಕಾಶ ದೊರೆತಾಗೆಲ್ಲ ಅವ ರಿಗೆ ಸಮನಾಗಿ ಇವರೂ ದುಡಿದಿದಾರೆ. ಅಮೆರಿಕಾ ಸಂಯುಕ್ತ ರಾಷ್ಟ್ರಗಳಲ್ಲಿ ಕ್ಯಾಲಿಫೋರ್ನಿಯಾ ತೋಟಗಳಲ್ಲೂ ಹೊಲಗಳಲ್ಲೂ ಹೀಗೆ ನಡೆಯುತ್ತಿದೆ. ಕೆನಡಾ ದೇಶದ ಬ್ರಿಟಿಷ್ ಕೊಲಂಬಿಯಾದಲ್ಲಿ ಓರೆಗಾಂ ಶಿಬಿರಗಳಲ್ಲಿ ನಡೆದ ಮರಕಡಿವ ಕೆಲಸದಲ್ಲೂ ವಾಷಿಂಗ್‌ಟನ್ನಿನ ಮರಕೊಯ್ಯು ಗಿರಣಿಗಳಲ್ಲೂ ನಡೆಯುತ್ತಾ ಇದೆ. ಅಮೆರಿಕದವ, ಚೀನೀ, ಜಪಾನೀ, ಕೆನಡಾದವ, ಮೆಕ್ಸಿಕೋ ದವ—ಇವರಲ್ಲಿ ಯಾರಿಗೂ ಕೆಲಸದಲ್ಲಿ ಸರಿಸಮ ಎನಿಸಿಕೊಂಡಿದಾರೆ ನಮ್ಮವರು ಆಯಾ ಭಾಗಗಳಲ್ಲಿ. ಆಗಲೇ ನಾವು ತಿಳಿದುಕೊಂಡಹಾಗೆ ನಮ್ಮ ಜನರಲ್ಲಿ ಯೋಗ್ಯತೆ ಸಾಮರ್ಥ್ಯ ಅಲ್ಲದೆ ನಾನಾ ವೈವಿಧ್ಯವೂ ಇದೆ.

ನಮ್ಮ ಪಟ್ಟಿಯಲ್ಲಿ ಎರಡನೆ ಸಾಲಿಗೆ ನಮ್ಮಹಾಗೆಯೆ **ಸಜೀವಪ್ರಾಣಿ** ಗಳನ್ನು ಸೇರಿಸೋಣ. ಈ ಗುಂಪಿನಲ್ಲಿ ಗುಡ್ಡದಂಥ ಆನೆಯಿಂದ ಹಗ್ಗದಂಥ ಹಾವು, ಸಣ್ಣದಾದ ಸೊಳ್ಳೆಯ ವರೆಗೆ ಬೇಕಾದಷ್ಟು ಬಗೆಯ ಜಂತುಗಳಿವೆ. ಇವು ಗಳಲ್ಲೆಲ್ಲ ದನಕರುಗಳೇ ಬಹಳ ಉಪಯೋಗಕರವಾದವು. ನಮ್ಮ ನಾಡಿನಲ್ಲಿ 18 ಕೋಟಿ ದನ; ಅಂದರೆ ಜಗತ್ತಿನ ಕಾಲ್ನಡೆಯ ಒಟ್ಟು ಸಂಖ್ಯೆಯ ಮೂರ ರೊಳಗೊಂದು ಪಾಲು ಇದೆ. ಕುರಿಮೇಕೆ 8 ಕೋಟಿ 70 ಲಕ್ಷ ಇವೆ. ಜಗತ್ತಿ ನಲ್ಲಿರುವ ಒಟ್ಟು ಕುರಿಮೇಕೆಯ ಮಂದೆಯಲ್ಲಿ ಏಳರೊಳಗೊಂದು ಪಾಲು.

ಮೂರನೆಯ ಸ್ಥಾನಕ್ಕೆ **ಸೂರ್ಯ**ನನ್ನು ಹಾಕೋಣ. ಆಗಲೇ ಪ್ರಾರಂಭ ಮಾಡಿದಿರಲ್ಲ ಗಲಾಟೆಗೆ. 'ಇದೇನಿದು! ಸೂರ್ಯ ಎಲ್ಲಾ ದೇಶಕ್ಕೂ ಇದಾನೆ ಯಲ್ಲವೇ' ಎಂದು ಕೇಳುತ್ತಿದೀರಿ. ಆದರೆ ಸೂರ್ಯನ ಬಿಸಿಲು ಎಷ್ಟು ಬೀಳುತ್ತದೆ, ಎಷ್ಟು ದಿನ ಬೀಳುತ್ತದೆ ಗೊತ್ತೇ? ನಿಜವಾಗಿಯೂ ಸೂರ್ಯ ನಮ್ಮ ಸೊತ್ತು ನಮ್ಮ ವಿಶೇಷ ಸಂಪತ್ತು. ಹಿಂದುಸ್ಥಾನದಲ್ಲಿ ಬಿಸಿಲು ಬಹಳ ಹೆಚ್ಚು ಎಂದು ನಮ್ಮಲ್ಲಿ ಕೆಲವರಿಗನಿಸುತ್ತದೆ. ಬಿಸಿಲಿನಿಂದ ನಮಗೆ ಬಹಳ ಸೆಕೆ ನೀರಡಿಕೆ ಬೇಸರ

ಆಗುವುದು ನಿಜ. ಆದರೆ ಅದರಿಂದ ನಮಗಾಗುವ ಲಾಭವನ್ನು ಗಮನಿಸಿರಿ. ಸೂರ್ಯನ ಪ್ರಖರಕಿರಣಗಳು ಸದಾ ನಮಗಾಗಿ ದುಡಿಯುತ್ತವೆ. ನಮ್ಮ ಮೈಗೆ ಪ್ರಾಣ ಸಾಮರ್ಥ್ಯಗಳನ್ನು ಕೊಡುತ್ತವೆ. ನಮ್ಮ ಹೊಲಗಳಿಗೆ ಸಾರವನ್ನೂ ಸತ್ವವನ್ನೂ ತರುತ್ತವೆ. ಹಿಂದೀ ಸಾಗರದ ನೀರನ್ನು ಮೋಡಮೊಳಕ್ಕೆ ಸೆಳೆದು ಕೊಂಡು 'ಮನ್‌ಸೂನ್' ಮೂಲಕ ಹಿಮಾಲಯ ಪರ್ವತಕ್ಕೆ ಒಯ್ದು ನೇರಿಸು ವುದಲ್ಲದೆ ನಮ್ಮ ನೀಮೆಗಳ ಮೇಲೆಲ್ಲ ಮಳೆ ಸುರಿಸುತ್ತವೆ. ನಮ್ಮ ಕೊಚ್ಚೆಯು ಕಾಲುವೆಗಳನ್ನೂ ಮಲಿತ ನೀರಿನ ಮಡುವುಗಳನ್ನೂ ಒಣಗಿಸಿ ಅನೇಕ ಕ್ರಿಮಿ ಗಳನ್ನೂ ಕೊಲ್ಲುತ್ತವೆ. ಈಗ ತಿಳಿಯುತ್ತದೆಯಲ್ಲವೆ? ಉಷ್ಣದೇಶದ ಜನ, ಹಿಂದು ಗಳೇ ಆಗಲಿ ಫಾರ್ಸಿಗಳೇ ಆಗಲಿ, ಎಲ್ಲರೂ ಸೂರ್ಯನನ್ನು ಆರಾಧಿಸಿ ಸೂರ್ಯ ನಮಸ್ಕಾರ ಹಾಕುತ್ತಿದ್ದುದರ ಅರ್ಥ. ಅವರೇನು ನಿಷ್ಪ್ರಯೋಜನವಾಗಿ ಹಾಗೆ ಮಾಡಲಿಲ್ಲ.

ತಮ್ಮ ಹೊಲಕ್ಕೆ ನೀರು ನೀಡಲೆಂದು ಆಸೆಯಿಂದ ನಮ್ಮ ಒಕ್ಕಲಿಗರು ದಾರಿನೋಡುತ್ತ ನಿರೀಕ್ಷಿಸುವ '**ಮನ್‌ಸೂನ್**' ಮಳೆ ನಾಲ್ಕನೆಯ ದೊಡ್ಡ ಸೊತ್ತು. ಕಡಲಿನಿಂದ ಗುಡ್ಡದ ತುದಿಗೆ ನೀರನ್ನು ಹೊತ್ತುಕೊಂಡು ಹೋಗಿ ನಮ್ಮ ನದಿಗಳು ಹರಿಯುವಂತೆ ಮಾಡುತ್ತದೆ ಇದು.

ಐದನೆಯದು ನಮ್ಮ **ಪರ್ವತಪಂಗ್ತಿ**; ಹಿಮಾಲಯವೂ ಅದರ ತಮ್ಮಂದಿರೂ. ಪರದೇಶದ ಜನ ನಮ್ಮ ಮೇಲೆ ದಂಡೆತ್ತಿ ಬಾರದಂತೆ ನಮ್ಮನ್ನು ಕಾಪಾಡುತ್ತವೆ ಇವು. ಮಧ್ಯ ಏಷಿಯಾದ ಒಣಗಾಳಿಯ ಬೆಂಕಿಗೆ ಇವು ಅಡ್ಡವಾಗಿರದಿದ್ದರೆ ನಮ್ಮ ಸಸ್ಯಸಮೃದ್ಧಿಯೆಲ್ಲ ನಿರ್ನಾಮವಾಗಿ ಉತ್ತರಭಾರತವೆಲ್ಲ ಮರುಳುಗಾಡಾಗಿ ಬಿಡುತ್ತಿತ್ತು. ಇಷ್ಟೇ ಅಲ್ಲ. ಗಿರಿತಲಕ್ಕೆ ಮೈದಾನಭೂಮಿಗೆ ನದೀನದಗಳನ್ನೂ ಜಲಪಾತಗಳನ್ನೂ ಕಳಿಸುವ ನಿಸರ್ಗಜಲಾಶ್ರಯಗಳಿವು. ರೋಗಿಗಳಿಗಿವು ಆರೋಗ್ಯಮಂದಿರ. ಬದುಕಿನ ಬೇಸರಕ್ಕೆ ನಿಸರ್ಗ ನೀಡಿದ ವಿಶ್ರಾಂತಿಸ್ಥಳ.

ಆಮೇಲೆ ನಮ್ಮ **ನದಿಗಳು**. ನಮ್ಮ ಹೊಲಗಳಿಗೆ ನದಿಗಳು ನೀರುಕೊಡು ತ್ತವೆ. ನೆಲಕ್ಕೂ ನಮಗಿದ್ದ ಹಾಗೆಯೇ ದಾಹವಿದೆ. ಅದಕ್ಕೂ ಬಾಯೊಣಗುತ್ತದೆ. ನದಿಯ ನೀರಿನಿಂದ ಅದಕ್ಕೆ ತೃಪ್ತಿ; ಅಲ್ಲದೆ ನದಿಯ ಪ್ರವಾಹವೇಗದಲ್ಲಿ ಮಹಾ

ಶಕ್ತಿಯೊಂದು ಅಡಗಿದೆ. ಆ ಶಕ್ತಿಯನ್ನು ಸ್ವಾಧೀನ ಮಾಡಿಕೊಂಡು ತಂತಿಯಲ್ಲಿ ತುಂಬಿ ಅದಕ್ಕೆ ವಿದ್ಯುಚ್ಛಕ್ತಿ (ಮಿಂಚಿನ ಶಕ್ತಿ)ಯೆಂದು ಹೆಸರಿಟ್ಟಿದ್ದೇವೆ. ಕೆನಡಾ ವನ್ನೂ ಅಮೆರಿಕದ ಸಂಯುಕ್ತ ರಾಷ್ಟ್ರಗಳನ್ನೂ ಬಿಟ್ಟರೆ ಜಲಶಕ್ತಿಯ ಸಾಧನ ಗಳು ಇಡೀ ಜಗತ್ತಿಗಿಂತ ನಮ್ಮಲ್ಲೇ ಉತ್ತಮವೆನ್ನಬಹುದು.

ಇದರ ತರುವಾಯ **ಗಾಳಿ**. ಹೌದು, ಗಾಳಿ ಕೂಡ. ಗಾಳಿ ನಮಗೆ ತಂಪುಹಾಯಿಕೊಡುವುದರ ಜೊತೆಗೆ ಗಾಳಿಗಿರಣಿಗಳನ್ನು ಹಿಂದುಸ್ಥಾನದಲ್ಲೆಲ್ಲ ಹೂಡಿ ಅದರ ಬಲವನ್ನೆಲ್ಲ ಉಪಯೋಗಿಸಿಕೊಂಡರೆ ಯಾರೋ ಒಬ್ಬ ಗ್ರಂಥಕರ್ತ ಹೇಳಿದ ಹಾಗೆ ಇಡೀ ಜಗತ್ತಿಗೆ ಬೇಕಾಗುವಷ್ಟು ವಿದ್ಯುತ್ತನ್ನು ನಿರ್ಮಿಸಿ ಬಳಸಬಹುದು.

ಗಾಳಿಯಿಂದ ಕೆಳಗಿಳಿಯೋಣ **ಭೂಮಿಗೆ**. ನಮ್ಮ ಭೂಮಿಯೆಲ್ಲ ಬೇಸಾ ಯಕ್ಕೆ ಸಿಗದು. ಭೂಮಿಯ ಮೇಲೆ ಕೆಲವುಕಡೆ ನಗರಗಳನ್ನೂ ಪಟ್ಟಣಗಳನ್ನೂ ಹಳ್ಳಿಗಳನ್ನೂ ಕಟ್ಟಿದಾರೆ. ಕೆಲವುಭಾಗ ಸಾಗುವಳಿಗೆ ಅನನುಕೂಲ. ಕೆಲವು ಪ್ರದೇಶ ಸಿಗುವುದಿಲ್ಲ. ಹೀಗಿದ್ದರೂ ನಮ್ಮ ಭೂಮಿಯಲ್ಲಿ ಮುಕ್ಕಾಲು ಭಾಗ ದಷ್ಟು ನೆಲ ಬೇಸಾಯಕ್ಕೆ ಅನುಕೂಲವಾಗಿದೆ. ಬೆಳೆಸಿದರೆ ಯಾವುದಾದರೂ ಒಂದು ಬೆಳೆ ಬೆಳೆಯುವ ಹಾಗಿದೆ.

ಸಾಗುವಳಿಗೆ ಯೋಗ್ಯವಾದ ನಮ್ಮ ಭೂಮಿಯಲ್ಲಿ ಐದರಲ್ಲೊಂದುಪಾಲು, ಅಂದರೆ 10 ಕೋಟಿ ಎಕರೆ ನೆಲದ ಮೇಲೆ ಪ್ರಕೃತಿಯೇ ನಮ್ಮ ಪಾಲಿನ ಕೆಲಸ ಮಾಡಿಬಿಟ್ಟಿದೆ. ಈ ಭಾಗವನ್ನು ದಟ್ಟವಾದ ಕಾಡುಗಳಿಂದ ತುಂಬಿ ನಮಗೆ ಅಡವಿಯನ್ನು ಸಿದ್ಧಮಾಡಿಕೊಟ್ಟಿದೆ. ಒಬ್ಬ ಇಂಗ್ಲಿಷ್ ಇಂಜನಿಯರು ಲೆಕ್ಕ ಹಾಕಿದಾನೆ—ಕಾಡು ಕೊಂಚವೂ ನವೆಯದ ಹಾಗೆ ವರುಷಕ್ಕೆ 10 ಕೋಟಿ ಟನ್ ಕಟ್ಟಿಗೆ ಕೊಡಬಲ್ಲವಂತೆ ನಮಗೀ ಅಡವಿಗಳು.

ಇನ್ನು ಉಳಿದುದೇನು? ನಮಗೆ ಬೇಕಾದ ಪದಾರ್ಥಗಳನ್ನೆಲ್ಲ ಅಗತ್ಯವಿದ್ದಷ್ಟು ಮಟ್ಟಿಗೆ ಅಲ್ಲೋ ಇಲ್ಲೋ ಎಲ್ಲಾದರೂ ಒಂದುಕಡೆ ಬೆಳೆಸಿಕೊಳ್ಳಬಹುದು. **ಬಹುದು** ಎಂದೆ. ಏಕೆಂದರೆ ಇನ್ನೂ ನಾವು **ಬೆಳೆಸಿಕೊಳ್ಳುತ್ತಿಲ್ಲ**. ನಮ್ಮ ಭೂಮಿಯಲ್ಲಿ ಈಗ ನಾವು ಬೆಳೆಯುವುದಕ್ಕಿಂತ ಎಷ್ಟು ಹೆಚ್ಚು ಬೆಳೆ ಬೆಳೆಯ


ಗೋಧಿ
ರಷ್ಯಾ
30
ಸಂ. ರಾಷ್ಟ್ರ
16
ಕೆನಡಾ
11
ಹಿಂದುಸ್ಥಾನ
7
ಫ್ರಾನ್ಸ್
6
ಆಸ್ಟ್ರೇಲಿಯ
6
ಇಟಲಿ
5
ಜರ್ಮನಿ
4
ತುರ್ಕಿ
3
ಜಪಾನ್
ಈಜಿಪ್ಟ್


ಭತ್ತ
ಜಗತ್ತು
100
ಏಷಿಯಾ
96
ಚೀನಾ
35
ಹಿಂದುಸ್ಥಾನ
26
ಜಪಾನ್
9
ಬರ್ಮಾ
6


ಸಕ್ಕರೆ
ಹಿಂದುಸ್ಥಾನ ಕ್ಯುಬಾ ಜಾವಾ ಫಾರ್ಮೊಸ್ ಬ್ರೆಜಿಲ್
18
16
8
7
6
82
18
ಹಿಂದುಸ್ಥಾನ


ಹೊಗೆಸೊಪ್ಪು
ಸಂ. ರಾಷ್ಟ್ರ
28
ಹಿಂದುಸ್ಥಾನ
22
ರಷ್ಯಾ
12
78
22
ಹಿಂದುಸ್ಥಾನ


ಹತ್ತಿ
ಸಂ. ರಾಷ್ಟ್ರ
41
ಹಿಂದುಸ್ಥಾನ
15
ರಷ್ಯಾ
13
ಚೀನಾ
11
ಬ್ರೆಜಿಲ್
7
ಈಜಿಪ್ಟ್
6
ಹಿಂದುಸ್ಥಾನ
85
15




ಬಹುದೆಂಬ ವಿಷಯವನ್ನು ನಿಧಾನವಾಗಿ ಹೇಳುತ್ತೇನೆ. ಈಗ ಬೆಳೆವ ಬೆಳೆಯೂ ಅಲ್ಪವೇನಲ್ಲ. ನಮ್ಮ ದೇಶದಲ್ಲಿ ಅನೇಕ ಪದಾರ್ಥಗಳು ಸಮೃದ್ಧಿಯಾಗಿವೆ. ಅವುಗಳಲ್ಲಿ ಒಂದೆರಡನ್ನು ಗಮನಿಸಿ ನೋಡೋಣ.

ಈ ಚಿತ್ರಗಳನ್ನು ನೋಡಿರಿ. ನಮಗೆ ದಿನಬಳಕೆಗೆ ಬೇಕಾಗುವ ಪದಾರ್ಥ ಹಿಂದುಸ್ಥಾನದಲ್ಲಿ ಎಷ್ಟೆಷ್ಟು ಬೆಳೆಯುತ್ತವೆಯೆಂಬುದು ಚೆನ್ನಾಗಿ ತಿಳಿಯುತ್ತದೆ. ನಾವು ದಿನಾಲೂ ತಿನ್ನುವ ಅಕ್ಕಿ ಗೋಧಿ ಸಕ್ಕರೆ, ಕುಡಿಯುವ ಚಹಾ, ನಮ್ಮ ಅರಿವೆಗೆ ಬೇಕಾದ ಹತ್ತಿ, ನಮ್ಮಲ್ಲಿ ಹರೆಯದವರು ಕೆಲವರು ಸೇದುವ ಬತ್ತಿ, ಅದಕ್ಕೆ ಬೇಕಾಗುವ ಹೊಗೆಸೊಪ್ಪು, ಎಲ್ಲವೂ ಹಿಂದುಸ್ಥಾನದಲ್ಲಿ ಯಥೇಚ್ಛವಾಗಿ ಬೆಳೆಯುತ್ತವೆಯಲ್ಲವೆ?

ಇಡೀ ಜಗತ್ತಿನಲ್ಲಿ ಹುಟ್ಟುವ ಬೆಳೆ ಒಟ್ಟು ನೂರುಪಾಲು ಎಂದುಕೊಂಡರೆ ಈ ಚಿತ್ರಗಳ ಮೇಲೆ ಕಾಣುವ ಅಂಕಿ ಆಯಾ ದೇಶದಲ್ಲಿ ಬೆಳೆದ ಬೆಳೆಯ ಪಾಲು ಎಂಬುದು ಸುಲಭವಾಗಿ ತಿಳಿಯುತ್ತದೆ.

ಇಲ್ಲಿಯತನಕ ಸೂರ್ಯಕಿರಣಕ್ಕೆ ಮೈಯೊಡ್ಡಿಯಾಯಿತು. ಮೋಡದಲ್ಲಿ ತೇಲಿ, ಗಾಳಿಯಲ್ಲಿ ಹಾರಿ, ಗಟ್ಟಿನೆಲದ ಮೇಲೆ ಕಾಲೂರಿದುದಾಯಿತು. ಇನ್ನು

ನೆಲ ತೋಡಿ ನಮ್ಮ ಗುಪ್ತನಿಧಿಯನ್ನಿಷ್ಟು ನೋಡೋಣ. ನಮ್ಮ ಭೂಮಿಯ ಹೊಟ್ಟೆಯಲ್ಲಿ ಯಾವಾವ ಖನಿಜಗಳಿವೆಯೋ ತೋಡಿಕೊಳ್ಳುವುದು ಹಾಗಿರಲಿ, ಇಂಥಿಂಥ ಸ್ಥಳದಲ್ಲಿವೆ ಎಂಬುದನ್ನೇ ನಾವಿನ್ನೂ ಸರಿಯಾಗಿ ತಿಳಿದುಕೊಂಡಿಲ್ಲ. ಕೆಲವು ಮಾತ್ರ ನಮಗೆ ಗೊತ್ತಿದೆ. ಸೋವಿಯೆಟ್ ರಷ್ಯಾ, ಗ್ರೇಟ್‌ಬ್ರಿಟನ್, ಅಮೆರಿಕದ ಸಂಯುಕ್ತ ರಾಷ್ಟ್ರಗಳಂಥ ಹೆಚ್ಚು ಭಾಗ್ಯವಂತ ದೇಶಗಳಲ್ಲಿದ್ದಷ್ಟು ಅಲ್ಲದಿದ್ದರೂ ನಮ್ಮ ದೇಶದಲ್ಲಿಯೂ **ಕಲ್ಲಿದ್ದಲಿನ** ಸಂಗ್ರಹ ಹೇರಳವಾಗಿದೆ. ನಮ್ಮ ಕಲ್ಲಿದ್ದಲಿನ ಸಂಗ್ರಹ 5,300 ಕೋಟಿ ಟನ್‌ಗಳಷ್ಟು ಇದೆಯೆಂದು ಊಹಿಸಲ್ಪಟ್ಟಿದ್ದರೂ ವರುಷಕ್ಕೆ 2 ಕೋಟಿ 8 ಲಕ್ಷ ಟನ್‌ಗಳಷ್ಟು ಮಾತ್ರವೇ ನಾವು ತೋಡುತ್ತಿರುವುದು. ಮುಂದೆ ಕೊಟ್ಟಿರುವ ಚಿತ್ರ ಬೇರೆ ಬೇರೆ ದೇಶಗಳಲ್ಲಿ ವರುಷಕ್ಕೆ ಎಷ್ಟು ಕಲ್ಲಿದ್ದಲು ಹುಟ್ಟುತ್ತದೆಯೋ ತೋರಿಸುತ್ತದೆ.




**ಕಬ್ಬಿಣ**ದಲ್ಲಿ ನಮ್ಮ ಬಂಡವಾಳ ಇದಕ್ಕಿಂತ ಚೆನ್ನಾಗಿದೆ. ಅಮೆರಿಕದ ಸಂಯುಕ್ತ ರಾಷ್ಟ್ರಗಳು ಮತ್ತು ಫ್ರಾನ್ಸ್ ಈ ಎರಡರ ತರುವಾಯ ನಮ್ಮ ನಾಡಿನ ಕಬ್ಬಿಣದದುರಿನ ನಿಧಿಯೇ ಜಗತ್ತಿನಲ್ಲೆಲ್ಲ ದೊಡ್ಡದೆಂದು ಬಲ್ಲವರು ಹೇಳುತ್ತಾರೆ. ಅಷ್ಟೇ ಅಲ್ಲ. ಉತ್ತಮವರ್ಗದ ಅದುರಂತೆ. ಆದರೆ ನಾವು ಬಳಸುತ್ತಿರುವ ನಮ್ಮ ಕಬ್ಬಿಣ ಎಲ್ಲೋ ಅಲ್ಪಸ್ವಲ್ಪ ಮಾತ್ರ. ಈ ಚಿತ್ರ ನೋಡಿದರೆ ಅದು ಗೊತ್ತಾಗುತ್ತದೆ.




1936 ರಲ್ಲಿ ಸೋವಿಯೆಟ್ ರಷ್ಯಾ 13 ಲಕ್ಷ 36 ಸಾವಿರ ಟನ್ '**ಮ್ಯಾಂಗನೀಸನ್ನು**' ತೆಗೆಯಿತು. ಅದರ ನಂತರ ಹಿಂದುಸ್ಥಾನವೇ 'ಮ್ಯಾಂಗನೀಸ್' ಉತ್ಪತ್ತಿಯಲ್ಲಿ ಮೊದಲನೆಯದು. ಇಡೀ ಜಗತ್ತಿನ 'ಮ್ಯಾಂಗನೀಸಿನ' ಉತ್ಪತ್ತಿಯಲ್ಲಿ ಆರರೊಳಗೊಂದುಪಾಲು ನಮ್ಮದು. ವರ್ಷಕ್ಕೆ 4,14,000 ಟನ್.




ಹೀಗೆಯೇ ನಮ್ಮ ಪ್ರಕೃತಿ ಸಂಪತ್ತನ್ನು ಕುರಿತು ನಿಮ್ಮ ತಲೆ ಚಿಟ್ಟು ಹಿಡಿವ ತನಕ ಹೇಳಬಲ್ಲೆ. ಆದರೆ ಹಾಗೆ ಮಾಡುವುದಿಲ್ಲ. ನಮ್ಮ ಪಟ್ಟಿ ಇನ್ನು ಮುಗಿಸುವ. ನಮ್ಮ ಹಿಂದುಸ್ಥಾನವೆಂದರೆ ನೀವೂ ನಾನೂ ಎಲ್ಲರೂ ಹೆಮ್ಮೆಪಡಬೇಕಾದ

ದೇಶವೆಂದು ನಿಮಗನಿಸಿದರೆ ನನಗಷ್ಟು ಸಾಕು. ಅದರಂತೆ ನಮ್ಮಿಂದ—ನಿಮ್ಮಿಂದ ನನ್ನಿಂದ—ಈ ದೇಶಕ್ಕೆ ಗೌರವ ಬಂದೀತೋ ಇಲ್ಲವೋ ಹೇಳಲಾರೆ! ಅದರ ಬಗ್ಗೆ ಆಮೇಲೆ ವಿಚಾರಮಾಡುವ. ಆದರೆ ನೀವೀಗ ನನ್ನನ್ನು ಒಂದು ಪ್ರಶ್ನೆ ಕೇಳುತ್ತೀರೇನೋ ಎಂದು ಕಾದಿದೇನೆ. ನೀವು ಬುದ್ಧಿವಂತರು. ನಿಮಗೆ ಕುತೂಹಲವಿದೆ. ನನಗೆ ಗೊತ್ತು ನೀವು ಕೇಳುತ್ತೀರಿ. 'ಇದೆಲ್ಲ ಸರಿ. ಆದರೆ ನಮ್ಮಾ ವಿಲಕ್ಷಣ ದೇಶವನ್ನು ನಾವು **ಮಾಡುವುದಾದರೂ** ಏನು? ನಮ್ಮಾ ವಿಸ್ತಾರ ಸಾಮಗ್ರಿಯನ್ನೆಲ್ಲ ಹೇಗೆ **ಉಪಯೋಗಮಾಡಿಕೊಳ್ಳುತ್ತೇವೋ**?' ಇದಕ್ಕೆ ಉತ್ತರ ಹೇಳಲೇ ನಿಮಗೆ? ಆಗಲಿ, ಮುಂದಿನ ಅಧ್ಯಾಯದಲ್ಲಿ.

# III

# ಒಂದು ಒಗಟು

ಮುಂಬಯಿಯಲ್ಲಿ ನನ್ನ ಗೆಳೆಯನೊಬ್ಬ ಇದ್ದಾನೆ. ಅವನಿಗೊಂದು ಕಚೇರಿಯಲ್ಲಿ ಕೆಲಸವಿದೆ. ತಿಂಗಳಿಗೆ 500 ರೂಪಾಯಿ ಸಂಬಳ. ನಮ್ಮ ದೇಶದ ಸದ್ಯದ ಸ್ಥಿತಿಗತಿಯಲ್ಲಿ ಇದು ಬಹಳ **ಹೆಚ್ಚು**, ಇದಕ್ಕಿಂತ ಹೆಚ್ಚಿಗೆ ಯಾರಿಗೂ ಗಳಿಕೆಯಿರಬಾರದು ಎಂದು ಅನೇಕ ಜನ ಬುದ್ಧಿವಂತರು ಹೇಳುತ್ತಾರೆ. ಆದರೆ ನನ್ನ ಅಭಿಪ್ರಾಯ ಹಾಗಲ್ಲ. ಪ್ರಾಮಾಣಿಕತನದಿಂದ ದುಡಿವವನಿಗೆ ನಾಗರಿಕನಂತೆ ಬದುಕು ಸಾಗಿಸಲು **ತೀರ ಕಡಮೆ**ಯೆಂದರೂ ಅಷ್ಟು ಬೇಕೇಬೇಕೆಂದು ನನ್ನ ಅಭಿಪ್ರಾಯ.

ಅದು ಹೇಗಾದರೂ ಇರಲಿ. ತನ್ನ ಹೆಂಡತಿ ಮತ್ತು ಇಬ್ಬರು ಮಕ್ಕಳೊಡನೆ ನನ್ನ ಗೆಳೆಯ, ಮುಂಬಯಿ ನಗರದ ಆರೋಗ್ಯವಂತವಾದ ಭಾಗವೊಂದರಲ್ಲಿ ನಾಲ್ಕು ಕೋಣೆಯ ಮನೆಯೊಂದರಲ್ಲಿ ವಾಸವಾಗಿದ್ದಾನೆ. ಅವನ ಮಕ್ಕಳು ಗಂಡು ಹೆಣ್ಣು ಕೂಡಿ ಕಲಿವ ಒಂದು ಚಲೋ ಶಾಲೆಗೆ ಹೋಗುತ್ತಾರೆ. ಗಂಡ ಹೆಂಡತಿ ಇಬ್ಬರೂ ಮನೆಮನೆಗೆ ಪುಸ್ತಕ ತಂದುಕೊಡುವ ಭಾಂಡಾರವೊಂದಕ್ಕೆ ಸದಸ್ಯರಾಗಿದ್ದಾರೆ. ಆದರಿಂದ ಓದಲಿಕ್ಕೆ ಹೊಸ ಹೊಸ ಪುಸ್ತಕ ಸಿಗುತ್ತವೆ. ಟೆನ್ನಿಸಾಗಲಿ ಮತ್ತೊಂದಾಗಲಿ ಆಟವಾಡಲಿಕ್ಕೆ 'ಸಮಾಜ'ಕ್ಕೆ ಹೋಗುತ್ತಾರೆ. ಚಿಕ್ಕದೊಂದು ಸ್ವಂತ ಮೋಟಾರಿದೆ. ಅದನ್ನು ತಾವೇ ನಡಿಸುತ್ತಾರೆ. ವರುಷಕ್ಕೊಂದು ಸಲವೋ ಏನೋ ನನ್ನ ಗೆಳೆಯನಿಗೆ ಬಿಡುವು ದೊರೆಯುತ್ತದೆ. ಆಗ ಸಂಸಾರಸಮೇತನಾಗಿ ನಮ್ಮಿ ದೊಡ್ಡ ದೇಶದಲ್ಲಿ ಎಲ್ಲಿಗಾದರೂ ವಿಶ್ರಾಂತಿಗಾಗಿ ಹೋಗುತ್ತಾನೆ.

ಹೀಗೆ ಬದುಕುವ ಮಂದಿ ನಮ್ಮ ನಾಡಿನಲ್ಲಿ **ಕೇವಲ** ಸ್ವಲ್ಪ. ಈ ಪುಸ್ತಕ ಓದುವವರಲ್ಲಿ ನೀವು ಕೆಲವರು ಅದೃಷ್ಟವಂತರಾಗಿ ಅಂಥ ಗುಂಪಿಗೆ ಸೇರಿರ


27

ಬಿಟ್ಟಿದೆ. ಚಿಕ್ಕಂದಿನಿಂದಲೂ ಈ ಮಾತು ಕೇಳಿ ಕೇಳಿ ಬೆಳೆದು ದೊಡ್ಡವರಾದಾಗ ನಮಗೆ ಅದನ್ನು ಕೇಳಿದರೆ ಏನು ಕೆಡುಕೆನಿಸದಂತೆ ಆಗಿಬಿಡುತ್ತದೆ. ಆದರೆ ಈ ಮಾತು ಅತಿಶಯೋಕ್ತಿಯಲ್ಲ; ಕಂಡದಂಥ ಸತ್ಯ. ನಮ್ಮ ದೇಶದ ವಿಶ್ವವಿದ್ಯಾನಿಲಯದ ಒಳ್ಳೊಳ್ಳೆಯ ಪಂಡಿತರೆಲ್ಲ ಲೆಕ್ಕ ಹಾಕಿ ಹೇಳಿದಾರೆ. ನಮ್ಮ ನಾಡಿನ ಸಾಮಾನ್ಯ ರೈತನೊಬ್ಬ ತಾನು, ತನ್ನ ಹೆಂಡತಿ, ಮೂರು ಮಕ್ಕಳು, ಇಷ್ಟು ಜನರ ಸಂಸಾರವನ್ನು ತಿಂಗಳಿಗೆ 27 ರೂಪಾಯಿಗಿಂತಲೂ ಕಡಮೆಯೊಳಗೆ ಸಾಗಿಸಬೇಕಾಗುತ್ತದೆ. ಹಿಂದುಸ್ಥಾನದ ಎಲ್ಲ ತರದ ಜನರನ್ನೂ ಹಿಡಿದರೆ ಬರುವ ಸರಾಸರಿ ಆದಾಯ ಇಷ್ಟೇ.

ಇಂಥ ಅರೆಹೊಟ್ಟೆ ಹೊಲಸುಗಳಲ್ಲಿ ಮುರುಕುಮನೆಗಳಲ್ಲಿ ಹುಟ್ಟಿದ ಮಕ್ಕಳು ಹೇಗೆ ಬದುಕಬೇಕು? ಹುಟ್ಟಿ ಒಂದು ವರ್ಷವಾದರೂ ತುಂಬುವುದರೊಳಗೇ




ನೂಣ ಸತ್ತಹಾಗೆ ಎಷ್ಟೋ ಮಕ್ಕಳು ಸತ್ತುಹೋಗುತ್ತವೆ. ಈ ಘೋರ ಪಾತಕಕ್ಕೆ ಶಿಶುಮರಣವೆಂದು ದೊಡ್ಡ ಹೆಸರಿಟ್ಟಿದ್ದಾರೆ. ಈ ಚಿತ್ರವನ್ನು ನೋಡಿ. ಸ್ವೀಡನ್ ದೇಶಕ್ಕಿಂತ ಹಿಂದುಸ್ಥಾನದಲ್ಲಿ ಶಿಶುಮರಣ ನಾಲ್ಕರಷ್ಟು ಹೆಚ್ಚಾಗಿದೆ.

ಸ್ವಲ್ಪ ವಿಚಾರಮಾಡುವ. ನಿಮಗೆಷ್ಟು ವರುಷ ಆಯುಸ್ಸು ಎಂದು ನಿಮಗನಿಸುತ್ತದೆ. ಎಷ್ಟು ವರ್ಷ ಬದುಕುತ್ತೀರಿ ನೀವು? '70 ವರ್ಷ' ಅಂದಿರಾ? 'ಕೊನೆಗೆ ಅರವತ್ತು ವರುಷಕ್ಕೇನು ಕಡಮೆಯಿಲ್ಲ' ಅಂದಿರಾ? ಆಗಬಹುದು. ಒಳ್ಳೆಯದು ಬಯಸಿದರೆ ಏನು ತಪ್ಪು! ಪಾಪ ಹಿಂದುಸ್ಥಾನದಲ್ಲಿ ಹುಟ್ಟಿದುದಕ್ಕಾಗಿ ನಿಮಗೆ—ಶಾಲೆಯಲ್ಲಿ ಓದುವ ಹುಡುಗ ಹುಡುಗಿಯರಿಗೆ—ಸಾಧಾರಣವಾಗಿ ಇನ್ನಿರುವುದು ಮೂವತ್ತೇ ವರುಷ ಆಯುಸ್ಸು. ಹೀಗೆಂದರೆ ನಿಮಗೆ ಸೇರದು, ಅಲ್ಲವೆ? ಆದರೆ ನಿಜವಾಗಿ ನೀವು ಪುಣ್ಯವಂತರೇ ಸರಿ. ಮೊದಲನೆ ವರುಷದ ಗಂಡ ದಾಟಿಕೊಂಡಿರಲ್ಲ!

ನಿಮ್ಮ ಮನೆಯಲ್ಲಿ ನಿಮಗೊಬ್ಬ ತಂಗಿಯೋ ತಮ್ಮನೋ ಹುಟ್ಟಿದರೆ ಆ ಮಗುವಿಗೆ 27 ವರುಷಕ್ಕೇ ಅವತಾರ ಸಮಾಪ್ತಿ. ಆದರೆ ಈ ಮಾತನ್ನು ನಿಮ್ಮ ತಾಯಿಗಾಗಲಿ ತಂದೆಗಾಗಲಿ ಹೇಳಬೇಡಿ. ಅವರಿಗೆ ದುಃಖವಾದೀತು. ವಯಸ್ಸಾದ ಮೇಲೆ ಎಲ್ಲರೂ ಹಾಗೆಯೆ.




ಈ ಚಿತ್ರದಲ್ಲಿ ನಾನಾದೇಶದ ಜನ ಬಾಳದಾರಿಯಲ್ಲಿ ನಡೆಯುತ್ತಿದಾರೆ. ಅಲ್ಲಿ ನೋಡಿ. ಫ್ರೆಂಚ್ ಮನುಷ್ಯ ಹೇಗೆ ಅರವತ್ತು ವರುಷದ ವರೆಗೆ ಆ ದಾರಿಯಲ್ಲಿ ನಡೆಯುತ್ತಿದಾನೆ. 70 ವರುಷ ವಯಸ್ಸಾದರೂ ನ್ಯೂಜಿಲೆಂಡಿನವ ಹೇಗೆ

ತನ್ನ ಕೋಲು ಬೀಸುತ್ತ ಹೋಗುತ್ತಾನೆ ನೋಡಿ. ಆದರೆ ಹಿಂದುಸ್ಥಾನದ ಭವಣೆ ಬಹಳ ದುಃಖದ್ದು. 30 ರ ಕಲ್ಲಿಗೆ ಬರುವ ಹೊತ್ತಿಗೇ ಇವನದು ಮುಕ್ತಾಯವಾಗುತ್ತದೆ.

ಹೀಗೇಕೆ ಆಗಬೇಕು? ಮುಂಬಯಿ ಕಚೇರಿಯಲ್ಲಿ ಕೆಲಸಮಾಡುವ ನನ್ನ ಗೆಳೆಯನಿಗಿದ್ದ ಹಾಗೆ ಎಲ್ಲ ಅನುಕೂಲಗಳೂ ದೀರ್ಘಾಯುಸ್ಸೂ ಭಾರತೀಯ ರೆಲ್ಲರಿಗೂ ಏಕೆ ಇರಬಾರದು? ಆತನ ಹಾಗೆ ಇವರೂ ಕಷ್ಟಪಡರೇನು? ಅದರಲ್ಲಿ ಅನುಮಾನವೇ ಇಲ್ಲ. ಅವರಲ್ಲನೇಕರು ಅತ್ಯಂತ ಕಷ್ಟವಾದ ಕೆಲಸವನ್ನೂ ಅಸಹ್ಯ ವಾದ ಕೆಲಸವನ್ನೂ ಮಾಡುತ್ತಾರೆ. ಇಷ್ಟು ಮಾಡಿಯೂ ಅವರಷ್ಟು ಬಡವರು ಯಾರೂ ಇಲ್ಲ! ದುರ್ದೈವ! ಈಗಿನ ನಮ್ಮ ಪ್ರಪಂಚದ ರೀತಿಯಲ್ಲಿ ದುಡಿತಕ್ಕೆ ಸರಿಯಾಗಿ ಫಲ ದೊರೆಯದು. ಹಾಗಲ್ಲದೆ ನಮಗೆಲ್ಲರಿಗೂ ಒಂದುವೇಳೆ ಸಮ ವಾಗಿಯೆ ಫಲ ದೊರೆತರೂ ನಮ್ಮ ಜನರಿಗೆ ತಿಂಗಳೊಂದಕ್ಕೆ ತಲಾ 6–8–0 ದೊರೆತೀತೆಂದು ನಮ್ಮ ಕಾಲೇಜಿನ ಪಂಡಿತರು ಹೇಳುತ್ತಾರೆ. ಈಗ ಸಾಮಾನ್ಯ ಜನರಿಗೆ ವರುಷಕ್ಕೆ ತಲಾ 64–6–0 ಆದಾಯ. ಸಮವಾಗಿ ಹಂಚಿದರೆ ಇದು 78 ರೂಪಾಯಿ ಆದೀತು ಅಷ್ಟೆ. ಈ 78 ರೂಪಾಯಿ ಸಾಧಾರಣವಾದೊಂದು ಕುಟುಂಬದಲ್ಲಿರುವ ಐದುಜನಕ್ಕೆ ಸಾಕೇ? ನೋಡೋಣ. ಹಾಗೆ ಸಮವಾಗಿ ನಿಷ್ಪಕ್ಷಪಾತವಾಗಿ ನಮ್ಮ ಆದಾಯವನ್ನು ಹಂಚಿದರೆ ನಮ್ಮಿ ಶ್ರೀಮಾನ್ ಭಾರತೀಯನಿಗೆ ಬರುವುದು (78×5ಲೆ) 390 ರೂಪಾಯಿ ವರುಷಕ್ಕೆ. ಅಂದರೆ ತಿಂಗಳಿಗೆ 32 ರೂ. 8 ಆಣೆ. ಇದರೊಳಗೆ ಇವನಿಗೂ ಸೌಭಾಗ್ಯವತಿಗೂ ಒಂದು ಗಂಡು ಎರಡು ಹೆಣ್ಣು—ಮೂವರು ಮಕ್ಕಳಿಗೂ ಆಗಬೇಕು. ಲೆಕ್ಕ ಹಾಕಿರಿ. ಐದು ಜನ ಭಾರತೀಯರ ಇಡೀ ಕುಟುಂಬವೊಂದಕ್ಕೆ ದಿನಕ್ಕೆ ಕೇವಲ ಒಂದು ರೂಪಾಯಿ ಚಿಲ್ಲರೆ.

ಹಾಗಾದರೆ ನಮ್ಮ ಮಕ್ಕಳೆಲ್ಲ ಹೊಟ್ಟೆಗಿಲ್ಲದೆ, ಹೊಟ್ಟೆಗೆ ಸಾಲದೆ ಬದುಕ ಬೇಕಾದಷ್ಟು ಬಡದೇಶವೇನು ನಮ್ಮ ಹಿಂದುಸ್ಥಾನ? ಏನೂ ಬೆಳೆಯದಂಥ ಮರಳುಗಾಡೇ ಇದು? ಅದರ ಗರ್ಭದಲ್ಲೇನೂ ಇಲ್ಲವೆ? ಪ್ರಕೃತಿಗೆ ನಮ್ಮ ಮೇಲೆ ಇಷ್ಟು ನಿಷ್ಕರುಣೆಯೇ?

'ಅಲ್ಲ ಅಲ್ಲ' ಎಂದು ಕೂಗಿಬಿಡುತ್ತೀ ನೀನು. ಅದಕ್ಕೆ ಕಾರಣವುಂಟು. ನಮ್ಮ ದೇಶ ಅಂಥ ನಿರ್ಭಾಗ್ಯಶಾಲಿಯಲ್ಲ. ಪ್ರಕೃತಿ ಅದಕ್ಕೆ ಚಲೋ ವೈಶಾಲ್ಯವನ್ನು ಕರುಣಿಸಿದೆ. ವಾಯುಗುಣದಲ್ಲಿ ವಿವಿಧತೆಯ ಹಿತವಿದೆ. ಹುಲುಸಾದ ಭೂಮಿ, ಯಥೇಷ್ಟವಾದ ಜಲಸೌಕರ್ಯ, ಭೂಮಿಯೊಳಗೆ ಅಮೂಲ್ಯವಾದ ಖನಿಜ ಸಂಗ್ರಹ, ಭೂಮಿಯ ಮೇಲೆ ಅರಣ್ಯಸಮುದಾಯ, ವಿಸ್ತಾರವಾದ ಪಶುಧನ, ಎಲ್ಲವನ್ನೂ ಪ್ರಕೃತಿ ಕೊಟ್ಟಿದಾಳೆಂಬುದು ನಿಮಗೆ ಗೊತ್ತಿದೆ. ನಮಗೂ ಪುರಾತನ ಸಂಸ್ಕೃತಿಯಿದೆ. ನಮ್ಮ ನಾಗರಿಕತೆಗೂ ವೈಭವದಿಂದ ಬೆಳಗಿದ ಕಾಲವೊಂದಿತ್ತು. ಪ್ರಪಂಚದ ಒಟ್ಟು ಜನಸಂಖ್ಯೆಯಲ್ಲಿ ಐದರಲ್ಲೊಂದು ಭಾಗವಾದ ನಾವು ಬುದ್ಧಿಯಲ್ಲಾಗಲಿ ಬಲದಲ್ಲಾಗಲಿ ಯಾವುದರಲ್ಲೂ ಕಡಮೆಯಿಲ್ಲ, ಯಾರಿಗೂ ಕೀಳಲ್ಲ ಎಂಬುದೆಲ್ಲ ನಿಮಗೆ ಗೊತ್ತಿದೆಯಲ್ಲವೆ?

ಹೀಗಾಗಿ ಹಿಂದುಸ್ಥಾನವು ಒಂದು ವಿಚಿತ್ರವಾದ ಒಗಟಾಗಿದೆ. ದೇಶ



ವೇನೋ ಸಮೃದ್ಧಿ, ಜನರಿಗೆ ಮಾತ್ರ ಬಡತನ. ಇದೊಂದು ಒಗಟೇ ಸರಿ. ಎಲ್ಲ ಒಗಟಿಗೂ ಒಂದು ಉತ್ತರ; ಅದನ್ನು ಬಿಡಿಸಲು ಒಂದುಪಾಯ ಇರಲೇಬೇಕಷ್ಟೆ.

ಈ ಪುಸ್ತಕದಲ್ಲಿ ಅಂಥ ಉಪಾಯ ಎಷ್ಟೋ ಇವೆ. ಚಿತ್ರವಿಚಿತ್ರ ಸ್ಪರ್ಧೆಗಳನ್ನೆಷ್ಟೋ ನೋಡಿದ ನಿಮಗೆ ಕಟ್ಟಕಡೆಗೆ 'ಇದೇನಿಷ್ಟು ಸುಲಭ' ಅನಿಸಿಬಿಡುತ್ತದೆ. ನಿಜವಾಗಿ ಅದು ಸುಲಭವೇ. ಆದರೂ ನಮ್ಮ ರಾಜಕೀಯ ಪ್ರಮುಖರೂ ಅರ್ಥಶಾಸ್ತ್ರ ಪಂಡಿತರೂ ಉದ್ಯೋಗ ನಾಯಕರೂ ಇತರ ವಿದ್ವಾಂಸರೂ ಮೋರೆ ಮುದುಡಿಕೊಂಡು, ಗಂಭೀರವಾಗಿ ಗೋಣಲ್ಲಾಡಿಸಿ, ಈ ತೊಡಕಿನ ಎಳೆಎಳೆಗೂ ಕೊನೆಯಿಲ್ಲದ ಹಾಗೆ ಚರ್ಚೆಮಾಡಿ, ಕಡೆಗೂ ಒಗಟು ಒಡೆಯದೆಯೆ ಬಿಡುತ್ತಾರೆ.

ಅದು ಸುಲಭವೇ ಸರಿ. ಹಿಂದುಸ್ಥಾನದ ಹುಡುಗರೂ ಹುಡುಗಿಯರೂ ಎಲ್ಲರೂ ಸೇರಿ ಈ ಸಮಸ್ಯೆ ಬಿಡಿಸಲು ಪ್ರಯತ್ನಮಾಡಿದರೆ ಅದು ಸುಲಭವೇ ಆದೀತು. ಈ ವಿಷಯ ಬಹಳ ಮುಖ್ಯವಾದುದರಿಂದ ಮುಂದಿನ ಪ್ರಕರಣಗಳಲ್ಲಿ ಕೆಲವು ಉಪಾಯಗಳನ್ನು ಸೂಚಿಸುವುದಗತ್ಯವಲ್ಲವೆ ?



# IV

# ಇಸ್ಪೇಟಿನ ಮನೆ

ಭಾರತೀಯನ ಚಿತ್ರವೊಂದು ಬರೆಯಿರಿ ಎಂದು ನಾನು ನಿಮಗೆ ಹೇಳಿದರೆ ಹೇಗೆ ಬರೆಯುತ್ತೀರಿ? ಅವನು ಹೇಗಿರುತ್ತಾನೆ, ಏನು ಮಾಡುತಿರುತ್ತಾನೆ?

ಸೊಗಸಾದ ಅಂಗಿ ಷರಾಯಿ ಹ್ಯಾಟು ಬೂಟು ತೊಡಿಸಿ ಮೇಜಿನ ಮುಂದೆ ಕೂಡಿಸುತ್ತೀರೋ, ಅಥವಾ ಉದ್ದವಾದ ನಿಲುವಂಗಿ (ಷೇರವಾನಿ), ಬಿಗಿಯಾದ ಪಾಯಿಜಾಮಾ ತೊಡಿಸಿ, ತಲೆಗೆ ದೊಡ್ಡ ರುಮಾಲು ಸುತ್ತಿ, ಕಾಲಿಗೆ ಚಡಾವು ಕೊಟ್ಟು, ಬೀದಿಯಲ್ಲಿ ಹೋಗುತ್ತಾ ಇರುವ ಹಾಗೆ ಬರೆಯುತ್ತೀರೋ? ಇಲ್ಲವೆ ನಿಮ್ಮ ಭಾರತೀಯನಿಗೆ ಬಿಳೀ ಬನೀನು, ಪಂಚೆ, ಗಾಂಧಿ ಟೋಪಿ ಕೊಡುತ್ತೀರೋ?



ನನಗೆ ಚಿತ್ರ ಬರೆಯಲು ಬಾರದು. ಆದರೆ ನನಗಾಗಿ ನಮ್ಮ ಚಿತ್ರಕಾರ ಬರೆದಿದ್ದಾನೆ ನೋಡಿ, ಬರಿಮೈ ಬರಿಗಾಲು ಭಾರತೀಯನ ಚಿತ್ರ. ತಲೆಗೆ ಒಂದು ಹರಕು ರುಮಾಲು ಸೊಂಟಕ್ಕೊಂದು ತುಂಡುಪಂಚೆ, ಎರಡೇ ಅವನ ಸಮಸ್ತ ವಸ್ತ್ರ. ಕೈಯ್ಯಲ್ಲೊಂದು ಕುಡುಗೋಲಿದೆ. ಸಾಧಾರಣವಾಗಿ ಭಾರತೀಯನೆಂದರೆ ನನಗೆ ಹೀಗನಿಸುತ್ತದೆ.

ಹತ್ತು ಜನ ಭಾರತೀಯರನ್ನು ನಮ್ಮ ಪ್ರತಿನಿಧಿಗಳಾಗಿ ಒಂದು ಸಾಲಿನಲ್ಲಿ ನಿಲ್ಲಿಸಿದರೆ ಅವರಲ್ಲಿ ಏಳುಜನ ನಾನು ಕೊಟ್ಟ ಚಿತ್ರದಲ್ಲಿರುವ ಭಾರತೀಯನ ಹಾಗೆ ಇರುತ್ತಾರೆ. ಅವರೆಲ್ಲ ಒಕ್ಕಲಿಗರು, ಅಂದರೆ ಬೇಸಾಯಮಾಡುವ ಆರಂಬ ಗಾರರು. ಎಂಟನೆಯವ ಗಿರಣಿ ಕೂಲಿಕಾರ. ಒಂಭತ್ತನೆಯವ ಗುಮಾಸ್ತೆಯೋ ಅಂಗಡಿಕಾರನೋ ಆದಾನು. ಹತ್ತನೆಯವ ವ್ಯಾಪಾರಿಯೋ ಜಮೀನುದಾರನೋ ಅಥವಾ ವಕೀಲನೋ ಡಾಕ್ಟರೋ ಆಗಬಹುದು.



ಹತ್ತು ವರುಷಕ್ಕೊಂದು ಸಲ ಸರಕಾರದವರು ನಮ್ಮನ್ನೆಲ್ಲ ಹೆಸರು ವಯಸ್ಸು ಕಸಬು ಮೊದಲಾದ ಪ್ರಶ್ನೆ ಕೇಳುತ್ತಾರಲ್ಲ. ಆ ಪ್ರಶ್ನೆಗಳಿಂದ ನಮಗೆಷ್ಟಾದರೂ ತಿಳಿಯುತ್ತದೆ. ಆ ವಿಚಾರಣೆಗೆ ಜನಗಣತಿ 'ಸೆನ್ಸಸ್' ಎನ್ನುತ್ತಾರೆ. ಈ ವರುಷ ಅಂಥದೊಂದು ಜನಗಣತಿ ನಡೆಯಿತಲ್ಲವೆ?

ಈ ವಿಚಾರಣೆಯಿಂದ ನಮಗೆ ತಿಳಿದುಬರುವ ಮೊದಲನೆ ಮಾತೆಂದರೆ ಹಿಂದುಸ್ಥಾನದಲ್ಲಿ ನೂರಕ್ಕೆ ತೊಂಭತ್ತು ಜನ ಗ್ರಾಮ ವಾಸಿಗಳು, ನೂರಕ್ಕೆ ಎಪ್ಪತ್ತೆರಡು ಮಂದಿ ಬೇಸಾಯ ದಿಂದ ಬದುಕುತ್ತಾರೆ ಎಂಬುದು. ನಮ್ಮ ನಾಡಿನ 7 ಲಕ್ಷ ಹಳ್ಳಿಗಳಲ್ಲಿ ಇಂಥವರು ಕೋಟ್ಯಾನುಕೋಟಿ ಜನ ಬದುಕುತ್ತಿದಾರೆ.



ಇವರೆಲ್ಲರೂ—ಬಹಳ ಮಂದಿ ವಯಸ್ಸು ಬಂದ ವರು ಕೂಡ—ಸ್ವಂತವಾಗಿ ಉತ್ತುಬಿತ್ತಿ ಬೇಸಾಯ ಮಾಡರು. ಕೆಲವರು ದೊಡ್ಡ ಜಮೀನುದಾರರು. ಅವರ

ತಂದೆ ತಾತಂದಿರು ಇವರಿಗಾಗಿ ಹೊಲ ಮನೆ ಮಾಡಿಟ್ಟು ಹೋಗಿದಾರೆ. ಸ್ವಂತ ವಾಗಿ ದುಡಿವುದು ಎಂದರೇನೋ ಇವರಿಗೆ ಗೊತ್ತೇಯಿಲ್ಲ. ಇವರ ಹೊಲಗಳ ಗುತ್ತಿಗೆ ಲಾವಣಿ ವಸೂಲುಮಾಡುತ್ತ ತಿರುಗುವ ಆಳುಗಳು ಕೆಲವರು. ಇನ್ನು ಕೆಲವರು ತಮ್ಮ ಹೊಲಗಳನ್ನು ತಾವೇ ಸಾಗುಮಾಡಿಕೊಳ್ಳುತ್ತ ಸಮಯಬಿದ್ದಾಗ ಕೂಲಿ ಕೊಟ್ಟು ಕೆಲಸ ಮಾಡಿಸಿಕೊಳ್ಳುತ್ತಾರೆ. ಗ್ರಾಮವಾಸಿಗಳಲ್ಲಿ ಹೆಚ್ಚು ಜನ ಸಣ್ಣಸಣ್ಣ ರೈತರು; ತಮ್ಮ ಹೊಲ ತಾವೇ ಸಾಗುವಳಿ ಮಾಡುವವರು ಇಲ್ಲವೆ ಯಾರದಾದರೂ ಹೊಲಮಾಡುವ ಸ್ವಂತ ಹೊಲವಿಲ್ಲದ ದುಡಿತಗಾರರು. ಇಂಥ ದುಡಿತಗಾರರ ಗುಂಪು ದಿನೇ ದಿನೇ ಬೆಳೆಯುತ್ತಿದೆ. 1921ರಲ್ಲಿ ಸಾವಿರ ರೈತರಿಗೆ 291 ಜನ ಹೊಲವಿಲ್ಲದ ದುಡಿತಗಾರರಿದ್ದರು ಹಿಂದುಸ್ಥಾನದಲ್ಲಿ. 1931ರಲ್ಲಿ ಇವರ ಸಂಖ್ಯೆ 407ಕ್ಕೇರಿತು. ಅಂದರೆ ನಮ್ಮ ರೈತರಲ್ಲಿ ಮೂವರೊಳಗೊಬ್ಬನಿಗೆ ಸ್ವಂತ ಹೊಲವಿಲ್ಲದೆ ಮೂರಾಣೆ ನಾಲ್ಕಾಣೆ ದಿನಗೂಲಿಗಾಗಿ ದುಡಿಯುತ್ತಾರೆ ಎಂದರ್ಥ.

ಎಲ್ಲಾ ದೇಶಗಳಲ್ಲಿಯೂ ಒಕ್ಕಲುತನದ ಕಸಬಿನಿಂದ ಇಷ್ಟು ಹೆಚ್ಚು ಜನರು ಬದುಕುವುದಿಲ್ಲ. ಎಷ್ಟೋ ದೇಶಗಳ ಹಳ್ಳಿಗಳಲ್ಲಿ **ಇಷ್ಟು** ಹೆಚ್ಚಾಗಿಯೂ ಪಟ್ಟಣಗಳಲ್ಲಿ **ಇಷ್ಟು** ಕಡಮೆಯಾಗಿಯೂ ಜನವಾಸಮಾಡುವುದಿಲ್ಲ. ಅಮೆರಿಕಾ ದಂಥ ದೇಶದಲ್ಲಿ 100 ಕ್ಕೆ 25 ಜನ ಮಾತ್ರವೇ ಒಕ್ಕಲುತನ ಮಾಡುತ್ತಾರೆ. ಇಂಗ್ಲೆಂಡಿನಂಥ ಕೆಲವು ದೇಶಗಳಲ್ಲಿ ಬೇಸಾಯಗಾರರು ನೂರಕ್ಕೆ ಕೇವಲ ಹತ್ತೇ ಜನರಿದ್ದು ಉಳಿದವರನೇಕರು ಪಟ್ಟಣವಾಸಿಗಳಾಗಿ ಗಿರಣಿಗಳಲ್ಲೋ ಕಚೇರಿ ಗಳಲ್ಲೋ ಅಂಗಡಿಗಳಲ್ಲೋ ಕೆಲಸಮಾಡುತ್ತಾರೆ.

ಒಂದಾನೊಂದು ಕಾಲದಲ್ಲಿ—ಬಹಳ ಕಾಲದ ಹಿಂದೇನೂ ಅಲ್ಲ—ಹಿಂದು ಸ್ಥಾನದ ಹಾಗೆ ಇಂಗ್ಲೆಂಡೂ ಹಳ್ಳಿಗಳ ದೇಶವಾಗಿತ್ತು. ಈ ಇನ್ನೂರು ವರುಷ ಗಳಲ್ಲಿ ಬ್ರಿಟಿಷರು ಗಿರಣಿಗಳನ್ನೂ ನಗರಗಳನ್ನೂ ಬೇಗ ಬೇಗ ಕಟ್ಟಿದರು. ಅದರ ಪರಿಣಾಮವಾಗಿ ಇಂಗ್ಲೆಂಡಿನಲ್ಲಿ ಉದ್ಯೋಗಕ್ರಾಂತಿ—ನಿಮ್ಮ ಇತಿಹಾಸಗಳಲ್ಲಿ 'ಇಂಡಸ್ಟ್ರಿಯಲ್ ರೆವಲ್ಯೂಷನ್' ಎನ್ನುತ್ತಾರಲ್ಲ ಅದು—ಆಯಿತು. ಈ ಹೆಸರಿನಲ್ಲಿ ಕೊಂಚ ವೈಚಿತ್ರ್ಯವಿದೆ. ಕ್ರಾಂತಿಯೆಂದರೆ ಬೇಗಬೇಗನೆ ನಡೆಯ

ಬೇಕಾದುದು. ಇದಕ್ಕೆ ಇನ್ನೂರು ವರುಷ ಹಿಡಿಯಿತು. ಇನ್ನೂ ಆ ಕ್ರಾಂತಿ ಆಗುತ್ತಲೇ ಇದೆ ಎನ್ನುವವರೂ ಕೆಲವರಿದಾರೆ.

ಹಿಂದುಸ್ಥಾನದಲ್ಲೂ ಅಂಥದೊಂದು ಪರಿವರ್ತನವಾದೀತೇನು? ಈ ದೇಶದ ರೈತರೂ ಪಟ್ಟಣ ಸೇರಿ ಗಿರಣಿಕೂಲಿಕಾರರಾದಾರೆಯೇ? ಈ ಪ್ರಶ್ನೆ ನೀವೂ ನಾನೂ ಉತ್ತರ ಕೊಡಬೇಕಾದ ಮಹಾಪ್ರಶ್ನೆ. ಪುಸ್ತಕದ ಕಟ್ಟಕಡೆಗೆ ಅದನ್ನು ನೋಡೋಣ.

ಒಂದು ಮಾತ್ರ ಸ್ಪಷ್ಟವಾಗಿ ಕಾಣುತ್ತದೆ. ಎಂಥ ಕ್ರಾಂತಿಯೇ ಬರಲಿ, ಎಷ್ಟು ಪರಿವರ್ತನವಾದರೂ ಆಗಲಿ ಹಿಂದುಸ್ಥಾನವೇನೊ ಈಗಿನಂತೆಯೇ ಭೂಮಿತಾಯಿ ಕೊಡುವ ಬೆಳೆಯಿಂದ ಬದುಕುವ ರೈತರ ನಾಡು, ಹಳ್ಳಿಗಳ ದೇಶವಾಗಿ ಉಳಿಯಲೇ ಬೇಕು.

ನಮ್ಮ ಜನಸಂಖ್ಯೆ ಬಹಳ ವೇಗವಾಗಿ ಬೆಳೆಯುತ್ತಿದೆ. ಎಷ್ಟು ಬೇಗ ಬೇಗ ನಮ್ಮ ಗಿರಣಿಗಳೂ ಉದ್ಯೋಗಗಳೂ ಬೆಳೆದರೂ ಈ ಹೆಚ್ಚಿನ ಜನಕ್ಕಾದರೂ ಅದರಲ್ಲಿ ಎಲ್ಲರಿಗೂ ಅವಕಾಶ ಸಿಕ್ಕೀತೋ ಇಲ್ಲವೋ ಹೇಳಲಾಗದು. ನಮ್ಮ ಜನಸಂಖ್ಯೆ 1948ರಲ್ಲಿ 42½ ಕೋಟಿಯಾಗುತ್ತದೆಂದು ಯಾವುದೋ ಪುಸ್ತಕದಲ್ಲಿ ಹೇಳಿದೆ. ನಮ್ಮಲ್ಲಿನ ಅತ್ಯುತ್ಸಾಹವಂತರು ಎಷ್ಟುಬೇಗ ಉದ್ಯೋಗಗಳು ಬೆಳೆಯಬೇಕೆಂದು ಬಯಸುತ್ತಾರೋ ಅಷ್ಟೇ ಬೇಗ ಬೆಳೆದರೂ ಕೂಡ ಈಗ ನಾವೆಷ್ಟುಜನ ಇದೇವೋ ಅಷ್ಟು ಜನ ಆಗಲೂ ಬೇಸಾಯ ಮಾಡಿಯೇ ಬದುಕಬೇಕಾದೀತು.

ಹಾಗಾದರೆ ಆಗಲೇ ನಾವು ಹಾಕಿಕೊಂಡ ಒಗಟಿಗೆ ಉತ್ತರಕೊಡಲಿಕ್ಕೆ ಮೊದಲು ನಮ್ಮ ಭೂಮಿಯ ವಿಷಯವನ್ನೂ ಅದರ ಮೇಲೆ ಕೆಲಸಮಾಡುವ ರೈತರ ಸಮಸ್ಯೆಗಳನ್ನೂ ಅವರು ಬೆಳೆಯುವ ಬೆಳೆಯ ವಿಚಾರವನ್ನೂ ಆಲೋಚಿಸಬೇಕು.

ನಮ್ಮ ದೇಶವೆಷ್ಟು ವಿಸ್ತಾರವಾದುದೋ ನಿಮಗೆ ತಿಳಿದಿದೆ. ಇಂಗ್ಲೆಂಡು ಮತ್ತು ವೇಲ್ಸ್‌ಗಳ 40ರಷ್ಟಿದೆ. ಆದರೆ ನಮ್ಮ ಭೂಮಿಯಲ್ಲಿ ಎಲ್ಲಾ ಕಡೆಗಳಲ್ಲೂ ನಮಗೆ ಬೆಳೆ ಸಿಗದು. ಕೊಂಚ ಭಾಗ ನಮ್ಮ ನಗರಗಳನ್ನೂ ಪಟ್ಟಣಗಳನ್ನೂ

ಹಳ್ಳಿಗಳನ್ನೂ ಕಟ್ಟಲು ಉಪಯೋಗಿಸಿದೇವೆ. ಕೆಲವು ಪ್ರದೇಶ ಕಲ್ಲುಗುಡ್ಡ, ಕೆಲವುಕಡೆ ಹಳ್ಳ ತಗ್ಗು, ಕೆಲವು ಮರಳುಗಾಡು. ಇವೆಲ್ಲವನ್ನು ಬಿಟ್ಟರೂ ಇನ್ನೂ ಮುಕ್ಕಾಲುಭಾಗ ಭೂಮಿ ಉಳಿಯುತ್ತದೆ. ಅದರಲ್ಲಿ ಯಾವ ಬೆಳೆಯನ್ನಾದರೂ ಬೆಳೆಯಬಹುದೆಂದು ಹೇಳಿದುದು ನೆನಪಿದೆ ತಾನೆ?

ಈ ಭಾಗ ಬಹಳ ವಿಸ್ತಾರವಾದುದು. ನಾವು ನಮ್ಮ ಹೊಲದಲ್ಲಿ ಇಂಗ್ಲೆಂಡಿನಲ್ಲಿ ಇಂಗ್ಲಿಷರವನು ತನ್ನ ಹೊಲದಲ್ಲಿ ಬೆಳೆಯುವಷ್ಟು ಬೆಳೆಯನ್ನು ಬೆಳೆದರೆ ವರುಷಕ್ಕೆ ಎಕರೆಯೊಂದಕ್ಕೆ 225 ರೂಪಾಯಿನ ಬೆಳೆಯಾಗಬೇಕಾದೀತು. ಯಾಕಾಗಬಾರದು? ಏನು ಅಡ್ಡಿ? ಇಂಗ್ಲೆಂಡಿನಲ್ಲಿ ಬೇಸಾಯ ಅಷ್ಟೇನು ಬಹಳ ಉತ್ಪತ್ತಿಯಾಗುವುದಿಲ್ಲ. ನಮ್ಮ ಹೊಲಗಳು ಅವಕ್ಕಿಂತ ಹುಲುಸು ಕಡಮೆಯೇ? ನಮ್ಮ ಜನ ಬುದ್ಧಿಯಲ್ಲಿ ಅವರಿಗಿಂತ ಕೀಳೇ?

ಆ ಪ್ರಕಾರ ನಾವೂ ಬೆಳೆದರೆ ನಮಗೆಷ್ಟು ಆದಾಯಬರುತ್ತದೆ ಬಲ್ಲಿರಾ? ನಮ್ಮ ಜನಕ್ಕೆ ತಲಾ ವರುಷಕ್ಕೆ 278 ರೂಪಾಯಿ ಅಥವಾ ದಿನಕ್ಕೆ 12 ಆಣೆ ಆಗುತ್ತದೆ. ಐದು ಜನರ ಕುಟುಂಬವೊಂದಕ್ಕೆ ಬರೀ ಹೊಲದ ಆದಾಯ ದಿನಕ್ಕೆ 3–12–0 ಬರುತ್ತದೆ. ಇದರ ಜೊತೆಗೆ ಉದ್ಯೋಗದ ಲಾಭ, ಖನಿಜಗಳ ಉಪಯೋಗ, ದನಗಳ ಸಹಾಯ ಎಲ್ಲವನ್ನೂ ಸೇರಿಸಿಕೊಳ್ಳಿ.

ಆದರೆ ನಿಜಸ್ಥಿತಿ ಮಾತ್ರ ಬಹಳ ಆಶ್ಚರ್ಯಕರವೂ ಅಸಮಾಧಾನಕರವೂ ಆಗಿದೆ. ಎಷ್ಟು ರೀತಿಯಲ್ಲಿ ಗಳಿಸಿದರೂ ಸುಮಾರು ಐದು ಜನರ ಭಾರತೀಯ ಕುಟುಂಬ ಒಂದಕ್ಕೆ ದಿನವೊಂದಕ್ಕೆ ಒಂದೇ ರೂಪಾಯಿ. ಅಂದರೆ ಬರಿಯ ಭೂಮಿಯಿಂದಲೇ ಬರಬೇಕಾದುದರಲ್ಲಿ ನಾಲ್ಕಾಣೆ ಭಾಗ ಮಾತ್ರ. ಹೀಗೇಂಟೆ? ಎಲ್ಲೋ ಏನೋ ತಪ್ಪುಗಂಟಾಗಿರಬೇಕು.

ಓಹೋ ತಿಳಿಯಿತು! ಸ್ವಲ್ಪ ಕಣ್ಣಿಟ್ಟು ನೋಡಿದರೆ ಗೊತ್ತಾಗುತ್ತದೆ ಈ ನಮ್ಮ ಐಶ್ವರ್ಯದರಮನೆ ಉರುಳಿ ಬಿದ್ದುದರ ಕಾರಣ. ಇಂಗ್ಲೆಂಡಿನಲ್ಲಿ ಸಿಗುವ ಹಾಗೆ ನಮ್ಮ ಹೊಲದಲ್ಲಿ ಎಕರೆಗೆ 225 ರೂಪಾಯಿ ದೊರೆಯುವುದಿಲ್ಲ.

ನಮ್ಮ ದೇಶದಲ್ಲಿ ಬೇಸಾಯಕ್ಕೆ ಯೋಗ್ಯವಾದ ನೆಲ ಕಾಲು ಪಾಲಿನಷ್ಟೋ ಮೂರರಲ್ಲೊಂದು ಭಾಗದಷ್ಟೋ ಸಾಗಿಲ್ಲದೆ ಪಾಳುಬಿದ್ದಿದೆ. ಸಾಗುವಳಿಯಾದ




ನೆಲದಲ್ಲೂ 225 ರೂಪಾಯಲ್ಲ, ಎಕರೆಗೆ 56 ರೂಪಾಯಿ ಮಾತ್ರವೇ, ಎಂದರೆ ನಮಗೆ ಸಿಗುವುದರ ಮೂರರಷ್ಟು ಜಪಾನಿನಲ್ಲಿ, ನಾಲ್ಕರಷ್ಟು ಇಂಗ್ಲೆಂಡಿನಲ್ಲಿ.

ದವಸದ ಉದಾಹರಣೆಯನ್ನು ತೆಗೆದುಕೊಳ್ಳೋಣ. ಇಂಗ್ಲೆಂಡಿನಲ್ಲಿ ಒಂದೆಕರೆಗೆ ವರುಷಕ್ಕೆ 2000 ಪೌಂಡು ದವಸ ಬೆಳೆಯುತ್ತದೆ. ಹಿಂದುಸ್ಥಾನದಲ್ಲಿ 690 ಪೌಂಡು ಮಾತ್ರವೇ. ನಿಮಗೆಲ್ಲರಿಗೂ ಇಷ್ಟವಾದ ಕಬ್ಬು ನೋಡಿ. ಜಾವಾದಲ್ಲಿ ಒಂದೆಕರೆಗೆ 40 ಟನ್ ಕಬ್ಬು ಬೆಳೆದರೆ ಹಿಂದುಸ್ಥಾನದಲ್ಲಿ ಹತ್ತೇ ಟನ್ನು. ಹತ್ತಿ ನಮ್ಮ ಮುಖ್ಯವಾದ ದುಡ್ಡಿನ ಬೆಳೆ; ಅಂದರೆ ಆಹಾರವಲ್ಲದ




ಪೈರು. ನಾವು ಎಕರೆಗೆ 98 ಪೌಂಡು ಹತ್ತಿ ಬೆಳೆಯುತ್ತೇವೆ. ಅದೇ ಸಂಯುಕ್ತ ರಾಷ್ಟ್ರಗಳಲ್ಲಿ 200 ಪೌಂಡು; ಈಜಿಪ್ಟಿನಲ್ಲಿ ಇನ್ನೂ ಹೆಚ್ಚು, 450 ಪೌಂಡು.

ಹಾಗಾದರೆ ನಾನು ನಿಮ್ಮೆದುರಿಗೆ ಐಶ್ವರ್ಯದ ಗೋಪುರ ಕಟ್ಟಿ ನಿಮಗೆ ಆಸೆ ಹುಟ್ಟಿಸಿದುದು ತಪ್ಪಾಯಿತೇ? ನನಗೆ ಹಾಗೆನಿಸದು. 'ಇಂಗ್ಲೆಂಡಿನ ಸಸ್ಯಶ್ಯಾಮಲವಾದ ನೆಲಕ್ಕಿಂತ' ಸಾರದಲ್ಲಿ ನಮ್ಮ ಹೊಲ ಕೀಳಾಗಿದ್ದು ನಮ್ಮ ಜನ ದಡ್ಡ ಕಾಡುಜನವಾಗಿದ್ದರೆ ಬೇರೆ ಮಾತು. ಆದರೆ ಹಾಗಿಲ್ಲವಲ್ಲ. ಈಗ ನಾವು ಎಕರೆಗೆ 225 ರೂಪಾಯಿ **ಬೆಳೆ ತೆಗೆಯದಿದ್ದರೂ** ಅಷ್ಟು ಬೆಳೆಯ **ಬಹುದು**; ತೀರ ಅಷ್ಟಲ್ಲದಿದ್ದರೂ ಅದರಂತೆ **ಬೆಳೆಯಲೇಬೇಕು** ಎಂದು ಹೇಳುತ್ತೇನೆ.

ಹಾಗೆ ಮಾಡಲು ತೊಡಗಬೇಕೆಂದು ನನ್ನ ಸೂಚನೆ. ಪುಸ್ತಕದಲ್ಲಿ ಬೆಳೆದುಕೊಳ್ಳಲು ಬಂದೀತೇ! ಅದರ ಹಾದಿಯನ್ನಾದರೂ ಹುಡುಕುವ. ನಮ್ಮ ನೆಲವನ್ನು ನಾವು ಸರಿಯಾಗಿ ಸಂಪೂರ್ಣವಾಗಿ ಉಪಯೋಗಿಸಲು ಏನು ತೊಂದರೆ ಇದೆಯೋ ನೋಡುವ. ಹಿಂದುಸ್ಥಾನದ ಬೇಸಾಯದಲ್ಲಿ ಎತ್ತ ನೋಡಿದರತ್ತ ಮಹಾ ಭಯಂಕರ ಲೋಪಗಳಿವೆ. ಎಲ್ಲಿಂದ ಮೊದಲು ಮಾಡಬೇಕೋ ತಿಳಿಯುವುದೇ ಕಷ್ಟ.

ಒಕ್ಕಲಿಗರೆ? ಅರೆಹೊಟ್ಟೆ, ಅಜ್ಞಾನ, ಅವಿದ್ಯೆ; ಸಾಲದುದಕ್ಕೆ ವರುಷಕ್ಕೆ ನಾಲ್ಕು ತಿಂಗಳು ನಿರುದ್ಯೋಗ. ದನವೆ? ಜನಕ್ಕಿಂತಲೂ ಕಡೆ; ಅರೆಮೇವು, ಕೊರೆಗಾವು, ಹೆಣದುಡಿತ. ಭೂಮಿಯೋ? ಚೂರು ಚೂರು ತುಂಡುಪಟ್ಟೆ; ಸಾವಿರ ವರ್ಷದ ಹಿಂದಿನ ಬುದ್ಧ ಅಶೋಕರ ಕಾಲದ ನೇಗಿಲು ಕುಂಟೆಗಳ ಉಳುಮೆ; ಎಂದೂ ಗೊಬ್ಬರ ಕಾಣದೆ ಕ್ಷಾರ ಕಳೆದುಹೋದ ಬರೀ ಮಣ್ಣು. ಹೊಳೆಯ ಹೊಡೆತಕ್ಕೆ ಮೊಂಡುಮಣ್ಣೆಲ್ಲ ಕೊಚ್ಚಿಹೋದ ನದೀತೀರದ ಹೊಲಗಳು, ನೀರಿಲ್ಲದೆ ಒಣಗಿಹೋದ ಬೆಂಗಾಡು, ಪೂರ್ವದಂತೆ ಗಿಡಮರಬಳ್ಳಿ ತುಂಬಿರದ ಅಡವಿ.

ನೀವು ಕೇಳಬಹುದು; 'ನಮಗೆ ಇಂಥ ಅಧೋಗತಿ ಹೇಗೆ ಬಂತು? ನಾವು ಬುದ್ಧಿವಂತ ಜನ ಎಂದು ಹೇಳಿದ್ದಿರಲ್ಲ ನೀವು.' ಈ ಪ್ರಶ್ನೆಗೆ ನೂರಾರು ಉತ್ತರಗಳಿವೆ. ನಿಮ್ಮ ಇತಿಹಾಸಪುಸ್ತಕಗಳಲ್ಲಿ ಅವನ್ನು ನೀವು ಓದಿಕೊಳ್ಳಬೇಕು. ಇಲ್ಲಿ ನಾವು **ಹಿಂದೆ** ನೋಡುತ್ತಿಲ್ಲ, **ಮುಂದೆ ನೋಡುತ್ತಿದ್ದೇವೆ**. ಆದುದರಿಂದ

ನಾವು ವಿಚಾರಿಸಬೇಕಾದ ಪ್ರಶ್ನೆ ಈ ತೊಡಕು ಹೇಗೆ **ಬಿಡಿಸ**ಬೇಕು ಎಂಬುದು. ಜನ ಅಂದುಕೊಳ್ಳುವುದಕ್ಕಿಂತ ಬೇಗ ನಾವು ತೊಡಕು ಬಿಡಿಸ**ಬಲ್ಲೆವು**. ತಾವು ತಂದುಕೊಂಡ ಕಷ್ಟಕ್ಕೆ ಮಂದಿಯನ್ನು ದೂರುವುದು ಜನರ ಸ್ವಭಾವ. ಪಂಜಾಬಿನ ಗಾದೆಯು ಹಾಗೆ: 'ರೈತ ಮೂರ್ಖನಾದರೆ ದೇವರ ತಪ್ಪು!' (ಜಮೀನ್ದಾರ್‌ಕಿ ಬೇಅಕಲಿ ಪರಮೇಶ್ವರ್‌ಕಾ ಕುಸೂರ್). ಇದಕ್ಕೆಲ್ಲ ಕಾರಣ ಪ್ರಕೃತಿಯು ನಿರ್ದಯೆಯಲ್ಲ, ನಮ್ಮ ತಿಳಿಗೇಡಿತನ. ನಾವೆಷ್ಟು ದಡ್ಡರೆಂಬುದು ನಿಮಗೆ ನಂಬಲು ಕಷ್ಟವಾದರೆ **ತಿಳಿಸಿ ಹೇಳುತ್ತೇನೆ**.

V

# ‘ಭೂಮಿಯ ಉಪ್ಪು’

ಶ್ರೇಷ್ಠರು ‘ಭೂಮಿಗೆ ಉಪ್ಪಿದ್ದ ಹಾಗೆ’ ಎಂದು ಕ್ರಿಸ್ತಾನರ ಬೈಬಲಿನಲ್ಲಿ ಹೇಳಿದೆ. ಉಪ್ಪು ಎಂದರೆ ಉತ್ತಮಗುಣ ಎಂದು ಇಲ್ಲಿ ಅಭಿಪ್ರಾಯ.

‘ಭೂಮಿಯಲ್ಲಿ ಉಪ್ಪೆಲ್ಲಿ ಬಂತು? ನಮಗೆ ಉಪ್ಪು ಬರುವುದು ಸಮುದ್ರದಿಂದ’ ಅನ್ನುತ್ತೀರಿ ನೀವು.

ಹೌದು. ನೀವೂ ನಾವೂ ತಿನ್ನುವ ಉಪ್ಪು ಕಡಲುನೀರಿನುಪ್ಪು. ಉಪ್ಪಿನೊಳಗೆ ಅದೊಂದು ಬಗೆ. ಅದಲ್ಲದೆ ಇನ್ನೂ ಕೆಲವು ಬಗೆ ಉಪ್ಪು ಇವೆ. ಕೆಲವು ಮಣ್ಣಿನೊಳಗೆ ಬೆರೆತುಕೊಂಡಿರುತ್ತವೆ. ಈ ಪ್ರಾಕೃತಿಕ ಲವಣಗಳಲ್ಲಿ ಸಾರಜನಕ, ‘ಪೊಟಾಸಿಯಮ್’, ರಂಜಕ, ‘ಲೈಮ್’ ಎನ್ನುವ ನಾಲ್ಕು ಉಪ್ಪು ಗಿಡಗಂಟಿಗಳ ಬೆಳವಣಿಗೆಗೆ ಅಗತ್ಯ. ಅವಕ್ಕೆ ಹೆಸರೇನಾದರೂ ಇರಲಿ ನಮಗೆ ಮುಖ್ಯವಾದುದು ಅವು **ಮಾಡುವ** ಕೆಲಸ.

ಭೂಮಿ, ಸೂರ್ಯ, ನೀರು, ಗಾಳಿ, ಈ ನಾಲ್ಕೂ ಸೇರಿ ಮಣ್ಣಲ್ಲಿ ಬಿದ್ದ ಬೀಜ ಮೊಳೆತು ಬೆಳೆಯಲು ಕಾರಣವಾಗುತ್ತವೆಯೆಂದು ಹಿಂದೆಯೇ ತಿಳಿದುಕೊಳ್ಳಲಿಲ್ಲವೆ. ಆದರೆ ಸಸ್ಯಗಳ ಬೆಳವಣಿಗೆಗೆ ಉಪಯೋಗವಾಗುವ ಪದಾರ್ಥ ಭೂಮಿಯಲ್ಲೇನಿದೆ? ಉತ್ತರ—ಭೂಮಿಯ ಉಪ್ಪುಗಳು. ಯಾವ ಹೊಲದಲ್ಲಿ ಈ ಉಪ್ಪು ಸರಿಯಾದ ಪ್ರಮಾಣದಲ್ಲಿ ಸಾಕಾದಷ್ಟಿರುತ್ತವೆಯೋ ಆ ಹೊಲದಲ್ಲಿ ಪೈರು ಬೇಗ ಬೆಳೆಯುತ್ತದೆ. ಅಂಥ ಭೂಮಿಯನ್ನು ಹುಲುಸಾದ ಹೊಲ ಎನ್ನುತ್ತಾರೆ. ನೆಲದಲ್ಲಿ ಉಪ್ಪು ಇರದಿದ್ದರೆ ಅಂಥ ಹೊಲಕ್ಕೆ ಬೆಂಗಾಡೆಂದು ಹೆಸರು.

ಎಲ್ಲ ಒಳ್ಳೆ ಪದಾರ್ಥಕ್ಕಿದ್ದ ಹಾಗೆ ಭೂಮಿಯಲ್ಲಿರುವ ಪ್ರಾಕೃತಿಕ ಲವಣಗಳ ಸಂಗ್ರಹಕ್ಕೂ ಸಾಧಾರಣವಾಗಿ ಒಂದು ಮಿತಿಯಿದೆ. ಅವು ಇರುವ ಪ್ರಮಾಣವೇ

ಸ್ವಲ್ಪ. ಬಳಸಿದ ಹಾಗೆಲ್ಲ ಪ್ರಕೃತಿ ಪುನಃ ಪುನಃ ನಮಗೆ ಇವನ್ನು ಸ್ವಲ್ಪ ಷ್ಟಟ್ಟಿಗೆ ಪ್ರಸಾದಿಸುತ್ತಿದೆ. ಆದರೂ ಹೊಲದಲ್ಲಿ ಪೈರು ಬೆಳೆಸಿದ ಹಾಗೆ ಅವು ಬಳಸಲ್ಪಟ್ಟು ಕಡಮೆಯಾಗುತ್ತ ಬರುತ್ತವೆ. ಸುಮಾರಾದ ಒಂದೆಕರೆ ಪೈರು ಒಂದು ವರುಷಕ್ಕೆ 20 ಪೌಂಡು ಸಾರಜನಕವನ್ನು ಬಳಸಿಬಿಡುತ್ತದೆ. ನೆಲದ ಉಪ್ಪು ಹೀಗೆ ಕಾಳು ಕಡಿಯಾಗಿಯೋ ಸೊಪ್ಪುಸದೆಯಾಗಿಯೋ ಹೊರಗೆ ಬಂದುಬಿಟ್ಟರೆ ನೆಲದಲ್ಲಿ ಅಷ್ಟರಮಟ್ಟಿಗೆ ಅದು ಕಡಮೆಯಾಗಿ ಹೋಗದೆ? ನೆಲದಲ್ಲಿ ಉಪ್ಪು ಎಷ್ಟೆಷ್ಟು ಕಡಮೆಯಾಗುತ್ತದೆಯೋ ಅಷ್ಟಷ್ಟು ಹೊಲದ ಬೆಳೆ ಕಡಮೆಯಾಗುತ್ತದೆ. ಇದನ್ನೆ 'ಫಲಕ್ಷಯ ನಿಯಮ' ಅನ್ನುತ್ತಾರೆ.

ಹಾಗಾದರೆ ಈ 20 ನೆ ಶತಮಾನದಲ್ಲಿನ್ನೂ ಭೂಮಿ ನಮಗೆ ಬೆಳೆ ಕೊಡು ತ್ತಿದೆಯಲ್ಲ, ಅದು ಹೇಗೆ ಎಂದು ನಿಮಗಚ್ಚರಿಯಾಗಿರಬೇಕು. ಇಷ್ಟುಹೊತ್ತಿಗೆ **ಇಡೀ** ಭೂಮಿಯೇ ಬೆಂಗಾಡಾಗಿ ನಾವೆಲ್ಲ ಉಪವಾಸವಿರಬೇಕಾಗಿತ್ತಲ್ಲವೆ ಅನಿಸಿರಬೇಕು. ನಿಮ್ಮ ಯೋಚನೆ ತಪ್ಪೇನಲ್ಲ. ತಾವು ಕದ್ದ ಲವಣಗಳನ್ನು ಮನುಷ್ಯರು ಏನಕೇನೋಪಾಯದಿಂದ ಹಿಂತಿರುಗಿ ನೆಲಕ್ಕೆ ಕೊಟ್ಟು ಪ್ರಕೃತಿಯ ಪುನಃ ಪ್ರಸಾದಕ್ಕೆ ನೆರವಾಗದಿದ್ದರೆ ಅಂಥದೇ ಏನಾದರೂ ಆಗಬಹುದಿತ್ತು. ಅವರು ನೆಲದಲ್ಲಿ ಬೆರೆಸುವ ಬೂದಿ, ಎಲುಬು, ಸಗಣಿ, ಸುಣ್ಣ, ಮೊದಲಾದ ಪದಾರ್ಥಗಳಲ್ಲಿ ಬೆಳೆಗಳ ಮಾರ್ಗವಾಗಿ ನೆಲದಿಂದ ಯಾವ ಉಪ್ಪು ಹೊರಗೆ ಬಂದವೋ ಅವೇ ಉಪ್ಪು ಇವೆ. ಇಂಥ ಪದಾರ್ಥಗಳಿಗೆ ಸಾರವರ್ಧಕ ಅಥವಾ ಗೊಬ್ಬರ ಎಂದು ಹೆಸರು. ಈ ಉಪ್ಪಿನ ನಿಧಿ ನಷ್ಟವಾಗದಿರಲು ಬದಲು ಪೈರು ಬೆಳೆಯುವುದು ಇನ್ನೊಂದು ಉಪಾಯ. ಈ ಸಲ ಹೊಲದಲ್ಲಿ ಒಂದು ಬಗೆಯ ಪೈರು ಬೆಳೆದರೆ ಮುಂದಿನ ಸಲಕ್ಕೆ ಅದರಲ್ಲಿ ಮತ್ತೊಂದು ಪೈರು ಬೆಳೆಸು ವುದು. ಒಂದೊಂದು ಪೈರು ಒಂದೊಂದು ಜಾತಿಯ ಉಪ್ಪನ್ನು ನೆಲದಿಂದ ಹೀರುವುದರಿಂದ ಹೀಗೆ ಮಾಡಿದರೆ ಒಂದೇ ಬಗೆಯ ಉಪ್ಪು ಮುಗಿದು ಹೋಗದ ಹಾಗೆ ಇದು ತಡೆ ಹಾಕುತ್ತದೆ. ಈ ಬದಲುಪೈರು ಪದ್ಧತಿಯ ಬೆಲೆ ಸಾವಿರಾರು ವರ್ಷಗಳಿಂದಲೂ ಇಂಗ್ಲಿಷರಿಗೆ ತಿಳಿಯುವ ಮೊದಲೇ ನಮ್ಮ ದೇಶದೊಳಗೆ ರೂಢಿಯಲ್ಲಿದೆ.

ನೀವು ಯಾವಾಗಲಾದರೂ ಹಳ್ಳಿಯನ್ನು ನೋಡಿದೀರಾ? ಇಲ್ಲದಿದ್ದರೆ ಬೇಗ ನೋಡಿಬರುವ ಪ್ರಯತ್ನ ಮಾಡಿ. ಹಳ್ಳಿಗೆ ಹೋದಾಗ ಅಲ್ಲಿಯ ಗುಡಿಸಲು ಗೋಡೆಗೆ ಸಾಲುಸಾಲಾಗಿ ಮೆತ್ತಿದ ಬೆರಣಿಯನ್ನು ನೀವು ನೋಡಿಲ್ಲವೆ?



ಇವನ್ನೆಲ್ಲ ಏನುಮಾಡುತ್ತಾರೆ ಅನಿಸಿಲ್ಲವೆ ನಿಮಗೆ? ಹೇಳುತ್ತೇನೆ ಕೇಳಿ. ಆ ಬಣಸಗಣಿಯಲ್ಲಿ ಕೊಂಚಭಾಗ ಬಲವಾದ ಗಾಳಿ ಬೀಸಿದರೆ ಧೂಳಾಗಿ ಹಾರಿ ಹೋಗುತ್ತದೆ. ಹಳ್ಳಿಯ ಜನರ ಗುಡಿಸಲು ನೆಲ ಸಾರಿಸಲು, ಗೋಡೆ ಬಳಿಯಲು ಸ್ವಲ್ಪ ಭಾಗ ಬಳಸಲ್ಪಡುತ್ತದೆ. ಆದರೆ ಅದರ ಉಪಯೋಗ ಹೆಚ್ಚಾಗಿ ಆಗುವುದು ರೈತರ ಅಡಿಗೆಯೊಲೆಗೆ, ಚಳಿಗಾಲದಲ್ಲಿ ಬೆಂಕಿ ಕಾಯಿಸಲಿಕ್ಕೆ.

'ನೆಲದ ಉಪ್ಪಿಗೂ ಈ ರಗಳೆಗೂ ಏನು ಸಂಬಂಧ?' ಎಂದು ಕೇಳ ಬಯಸುತ್ತೀರಲ್ಲವೆ ನೀವು. ಇಷ್ಟೆ, ಸಗಣಿಯಲ್ಲಿ ಸಾಧಾರಣವಾಗಿ ಈ ಎಲ್ಲ ತರದ ಉಪ್ಪು ಇವೆ. ನಮಗೆ ಸಿಗುವ ಗೊಬ್ಬರದಲ್ಲಿ ಉತ್ತಮವಾದುದರೊಳಗೆ ಅದೊಂದು. ಭೂಮಿಗೆ ಬೇಕಾದ ಹೆಚ್ಚಾದ ಪದಾರ್ಥಗಳನ್ನು ಈ ರೀತಿಯಾಗಿ ಪ್ರಕೃತಿ ನಮಗೆ ಕೊಟ್ಟಿದೆ. ನಮ್ಮ ದನಕರು ನಮಗೆಷ್ಟೋ ಬಗೆಯಲ್ಲಿ

ಉಪಕಾರಮಾಡುತ್ತವೆ. ಅದರೊಳಗೆ ಅವು ನಮಗೆ ಗೊಬ್ಬರ ಒದಗಿಸುವುದು ಸಣ್ಣ ಉಪಕಾರವೇನಲ್ಲ.

ಆದರೆ ಅದನ್ನು ನಾವೇನು ಮಾಡುತ್ತೇವೆ? ಬೆಂಕಿಯಲ್ಲಿ ಹಾಕಿ ಸುಡುತ್ತೇವೆ! ಇದರ ಹಾಗೆಯೆ ಚಲೋ ಗೊಬ್ಬರವಾದ ನೆಲಗಡಲೆ ಹಿಂಡಿ, ಎಲುಬಿನ ಪುಡಿ, ನಮಗೆ ಅಗತ್ಯವಾದರೂ ಅವನ್ನು ಪರದೇಶಕ್ಕೆ ಮಾರುತ್ತೇವೆ! ಕೋಟ್ಯಾಂತರ ಜನ ಇಷ್ಟು ಮೂರ್ಖರಾಗಿದಾರೆ ಎಂಬ ಕಲ್ಪನೆಯಾದರೂ ನಿಮಗೆ ಬಂದೀತೆ?

ಹಾಗಾದರೆ ಬನ್ನಿ. ಯಾರಾದರೂ ಒಬ್ಬ ದಡ್ಡ ರೈತನನ್ನು—ಅವನ ಹೆಸರು ರಾಮು ಎಂದಿರಲಿ—ಅವನು ಸಗಣಿಯನ್ನು ಗೊಬ್ಬರಮಾಡಿ ಹೊಲಕ್ಕೆ ಹಾಕದೆ ಅದನ್ನೇಕೆ ಸುಟ್ಟುಹಾಕುತ್ತಾನೋ ಕೇಳೋಣ.

'ಸುಡಲಿಕ್ಕೆ ಅನುಕೂಲವಾಗಿದೆ' ಎನ್ನುತ್ತಾನೆ ರಾಮು.

'ಅಲ್ಲಯ್ಯ, ಸುಡಲಿಕ್ಕಿಂತ ಹೊಲಕ್ಕೆ ಹಾಕಿ ಬೆಳೆ ಬೆಳೆಸುವುದು ಹೆಚ್ಚು ಅನುಕೂಲವಲ್ಲವೆ?' ನೀವು ಕೇಳುತ್ತೀರಿ.

'ಇದ್ದರೆ ಇದ್ದೀತು. ಆದರೆ ಅಡಿಗೆಗೆ ಉರವಲು ಬೇಡವೆ ನನಗೆ?' ಎನ್ನುತ್ತಾನೆ ರಾಮು ಮೋರೆ ಸಿಂಡರಿಸಿಕೊಂಡು.

ನೀವು ಹೇಳುತ್ತೀರಿ "**ನಾವು** 'ಗ್ಯಾಸಿನಿಂದ' ಅಡಿಗೆಮಾಡುತ್ತೇವೆ."

ರಾಮು ಅದಕ್ಕೆ ಸುಮ್ಮನೆ ತಲೆಯಲ್ಲಾಡಿಸುತ್ತಾನೆ. 'ಗ್ಯಾಸ್' ಅಂದರೇನೋ ಅವನಿಗೆ ಗೊತ್ತೇಯಿಲ್ಲ. ನೋಡಿಯೂ ಇಲ್ಲ ಕೇಳಿಯೂ ಇಲ್ಲ.

'ಹೋಗಲಿ, ಇದ್ದಲು ಸೌದೆ ಇವೆಯಲ್ಲ?'

'ಅದಕ್ಕೆಲ್ಲ ಬಹಳ ದುಡ್ಡು ಬೇಕು. ಸಗಣಿಯಾದರೆ ನಮಗೆ ಕಾಸು ಕೊಡದೆಯೆ ಸಿಗುತ್ತದೆ.'

ರಾಮುನ ಮಂದಬುದ್ಧಿಗೆ ಇದನ್ನೆಲ್ಲ ಹೇಗೆ ತಿಳಿಸಿಕೊಡಬೇಕೋ ನಿಮಗೆ ತೋಚದು. ತಟ್ಟನೆ ನಿಮಗೊಂದು ವಿಚಾರ ಹೊಳೆಯಿತು. ತಿಳಿದುಕೊಂಡವರಂತೆ ನೀವು ಮುಗುಳುನಗೆ ನಗುತ್ತಾ ಇದ್ದೀರಿ.

'ನಿನ್ನಲ್ಲಿ ಐದು ರೂಪಾಯಿ ನೋಟು ಇದೆಯೇ?' ಎಂದು ಕೇಳುತ್ತೀರಿ.

‘ಈಗ ನನ್ನಲ್ಲಿಲ್ಲ. ಕಾಳುಕಡಿ ಮಾರಲಿಕ್ಕೆ ಹೋದಾಗ ನನಗೆ ಸಿಗುತ್ತದೆ.’ ನೊಂದುಕೊಂಡು ಹೇಳುತ್ತಾನೆ ರಾಮು.




‘ಆ ನೋಟು ತಂದು ಬೆಂಕಿಯಲ್ಲಿ ಹಾಕಿ ಒಲೆಯುರಿಸುತ್ತೀಯೇನು ನೀನು?’ ನೀವು ಕೇಳುತ್ತೀರಿ.

ರಾಮು ನಿಮ್ಮ ದಡ್ಡತನಕ್ಕೆ ಗಟ್ಟಿಯಾಗಿ ನಗುತ್ತಾನೆ. ‘ಎಲ್ಲಾದರೂ ಅಷ್ಟು ತಿಳಿಗೇಡಿ?’ ಎನ್ನುತ್ತಾನೆ.

ನೀವು ಬಿಡುವುದಿಲ್ಲ. ‘ಅದೇಕೆ ತಿಳಿಗೇಡು?’ ಎನ್ನುತ್ತೀರಿ.

‘ಅಲ್ಲ, ಐದು ರೂಪಾಯಿ ಇದ್ದರೆ ಎಷ್ಟೋ ದಿನಸು ಕೊಳ್ಳಬಹುದಲ್ಲವೆ?’

ರಾಮು ನಿಮ್ಮ ದಾರಿಗೆ ಬಂದನೆಂದು ನಿಮಗೆಷ್ಟೋ ಹಿಗ್ಗು. ‘ಅಲ್ಲವೆ ಅಲ್ಲವೆ’ ಎಂದು ಕೂಗುತ್ತೀರಿ. ‘ಹಾಗೆಯೇ ಸಗಣಿಯನ್ನು ಸುಡಲಿಕ್ಕಿಂತ ಬೇರೆ ಬಗೆಯಾಗಿ ಬಳಸುವುದು ಒಳ್ಳಿತಲ್ಲವೆ? ನಿಮ್ಮ ಸಗಣಿಯನ್ನು ಸುಡುವುದಕ್ಕಿಂತ ಗೊಬ್ಬರಮಾಡಿ ಹೊಲಕ್ಕೆ ಹಾಕಿದರೆ ಬೆಳೆ ಒಂದಕ್ಕೆ ಎರಡು ಮೂರು ಪಟ್ಟು ಬೆಳೆದು ಇಂಥ ನೋಟು ಹೆಚ್ಚಿಗೆ ಸಿಗುವುದಿಲ್ಲವೆ? ಅದರಿಂದ ನಿನಗೆ ಬೇಕಾಗುವ ಸೌದೆಯನ್ನೂ ದಿನಸನ್ನೂ ಕೊಂಡರಾಗದೆ?’

‘ಅದೆಲ್ಲ ಸರಿಯಣ್ಣಾ’ ರಾಮು ಮೆಲ್ಲಗೆ ಹೇಳುತ್ತಾನೆ. ‘ಹೊಲಕ್ಕೆ ಗೊಬ್ಬರ ಹಾಕಿ ಕಾಳುಕಡಿ ಬೆಳೆದು ಅದು ಮಾರಿ ಐದು ರೂಪಾಯಿ ನೋಟುಗಳು ಕೈಗೆ ಬರುವ ತನಕ ಮನೆಯೊಳಗೆ ಒಲೆ ಹೇಗೆ ಉರಿಸಲಿ, ರೊಟ್ಟಿ ಹೇಗೆ ಸುಡಲಿ?

ಈ ಪ್ರಶ್ನೆಗೆ ಸಿದ್ಧವಾದ ಉತ್ತರ ನಮಗೆ ಗೊತ್ತಿಲ್ಲ. ಇರಲಿ, ರಾಮುನನ್ನು ಒಂದುಗಳಿಗೆ ಅಲ್ಲಿಯೆ ಬಿಟ್ಟು ಗೊಬ್ಬರ ಉರವಲು ಸೌದೆ ಇವುಗಳ ವಿಷಯವನ್ನು ಕೊಂಚ ತಿಳಿದುಕೊಳ್ಳೋಣ. ತಿಳಿದುಕೊಂಡು ಆ ಪ್ರಶ್ನೆ ಬಿಡಿಸೋಣ.

ನಮಗೆ ಮೊದಲು ತಿಳಿವ ವಿಷಯ ಒಂದು: ಸಗಣಿಯಲ್ಲಿ ಕೆಲವು ಉಪ್ಪು

ಇದ್ದರೂ ನೆಲಕ್ಕೆ ಇನ್ನೂ ಕೆಲವು ಉಪ್ಪು ಬೇಕೆಂಬುದು. ಅಂದರೆ ಗೊಬ್ಬರಕ್ಕೆ ಸಗಣಿಯೊಂದೇ ಸಾಲದು. ಅದರಲ್ಲಿ ಅಂಥ ಸಂಪೂರ್ಣ ಗುಣವಿಲ್ಲ.




ಸಗಣಿಯಲ್ಲಿ ಬರಿಯ **ರಾಸಾಯನಿಕ** ಗುಣವಷ್ಟೆ ಅಲ್ಲ; ಉಪಯೋಗಕರವಾದ **ಪ್ರಾಕೃತಿಕ** ಗುಣವೂ ಇದೆ. ಗಡುಸಾದ ಕರಲು ನೆಲವನ್ನು ಮಿದುವಾಗಿ ಹದ ಮಾಡುತ್ತದೆ; ಮಿದುವಾದ ಉಸುಕುನೆಲವನ್ನು ಗಡುಸು ಮಾಡುತ್ತದೆ. ಸಗಣಿ ಜೀವಗೊಬ್ಬರ. ಸಸ್ಯಗಳ ಬೆಳವಣಿಗೆಗೆ ಮುಖ್ಯವಾಗಿ ಬೇಕಾದ ಕ್ರಿಮಿ ಕೋಟಿಯ ಉತ್ಪತ್ತಿಗೆ ಸಹಾಯವಾಗುತ್ತದೆ.

ಬೇರೆ ಬೇರೆ ಗೊಬ್ಬರವನ್ನು ಉಪಯೋಗಿಸಿದರೆ ಏನೇನು ಪರಿಣಾಮವಾಗುತ್ತದೆಯೋ ತಿಳಿದುಕೊಳ್ಳಲು ಎಷ್ಟೋ ಪ್ರಯೋಗಗಳಾಗಿವೆ. ನಮ್ಮ ಬೇಸಾಯದಲ್ಲಿ ಸಾರವರ್ಧಕಗಳು ಎಷ್ಟು ದೊಡ್ಡ ಕೆಲಸಮಾಡಬಹುದೋ ಒಂದೆರಡು ಪ್ರಯೋಗಗಳನ್ನು ವಿವರಿಸಿ ತಿಳಿಸುತ್ತೇನೆ.

ಒಂದೂರಿನಲ್ಲಿ ಒಂದೆಕರೆ ಹೊಲ. ಅದಕ್ಕೆ ಗೊಬ್ಬರವೆ ಇಲ್ಲ. ಅಂಥದರಲ್ಲಿ ವರ್ಷವೊಂದಕ್ಕೆ 1374 ಪೌಂಡು ಕಾಳೂ 2174 ಪೌಂಡು ಮೇವೂ ಸಿಗುತ್ತಿತ್ತು. ದನದ ಗೊಬ್ಬರವನ್ನು ಆ ಹೊಲಕ್ಕೆ ಹಾಕಿದ ಮೇಲೆ ಅದರಲ್ಲಿ 3556 ಪೌಂಡು ಕಾಳು 4779 ಪೌಂಡು ಮೇವು ಬೆಳೆಯಿತು. ನಿಮಗೆ ಇದು ಅಚ್ಚರಿಯೆನಿಸುತ್ತದೆಯಲ್ಲವೆ? ಅಲ್ಲಿಗೇ ಮುಗಿಯಲಿಲ್ಲ ಆಶ್ಚರ್ಯ, ಇನ್ನೂ ಇದೆ. ದನದ ಗೊಬ್ಬರದ ಬದಲು ಎಲುಬಿನ ಪುಡಿ 'ಸಾಲ್ಟ್ ಪೀಟರ್' ಗೊಬ್ಬರ ಬಳಸಿದರೆ ಅದರಲ್ಲೇ 4389 ಪೌಂಡು ದವಸ 6178 ಪೌಂಡು ಮೇವು ಆಯಿತು. ಅದೇ ಒಂದೆಕರೆ ಹೊಲ ಮೊದಲಿಗಿಂತ **ಮೂರುಪಾಲು** ಹೆಚ್ಚಾಗಿ ಬೆಳೆ ಕೊಟ್ಟಿತು.

ಹತ್ತಿ ಬೆಳೆವ ನೆಲದಲ್ಲಿ ಇನ್ನೂ ವಿಚಿತ್ರ ಪರಿಣಾಮ ಕಂಡವು. ಗೊಬ್ಬರವಿಲ್ಲದೆ ಒಂದೆಕರೆಗೆ 50 ಪೌಂಡು ಹತ್ತಿ ಬೆಳೆಯುತ್ತಿತ್ತು. ನಾಲ್ಕು ಟನ್ ದನದ ಗೊಬ್ಬರ ಬಳಸಿದಾಗ ಬೆಳೆ 80 ಪೌಂಡಿಗೆ ಏರಿತು. ಪಾವು ಟನ್ 'ಸೋಡಾ


1,374 ಪೌಂಡು ದವಸ
2,174 ಪೌಂಡು ಮೇವು
ಒಂದು ಎಕರೆ
1


+
,556 ಪೌಂಡು ದವಸ
4,779 ಪೌಂಡು ಮೇವು
ಒಂದು ಎಕರೆ
2


+
ಎಲುಬಿನ ಪುಡಿ
ಸಾಲ್ಟ್ ಪೀಟರ್
6,178 ಪೌಂಡು ಮೇವು
4,389 ಪೌಂಡು ದವಸ
ಒಂದು ಎಕರೆ
3



ಒಂದು ಎಕರೆ



4 ಟನ್ ದನದ ಗೊಬ್ಬರ



1 ಹಂ. ವೈ. ನೈಟ್ರೇಟ್
1 ಹಂ. ವೈ. ಸೂಪರ್ ಫಾಸ್ಫೇಟ್ಸ್
1 ಹಂ. ವೈ. ಕೈನಿಟ್







2 ಹಂ. ವೈ. ನೆಲಗಡಲೆ ಹಿಂಡಿ
2 ಹಂ. ವೈ. ಸೂಪರ್ ಫಾಸ್ಫೇಟ್ಸ್
2 ಹಂ. ವೈ. ಕೈನಿಟ್





ನೈಟ್ರೇಟ್', ಪಾವು ಟನ್ 'ಸೂಪರ್ ಫಾಸ್ಫೇಟ್ಸ್' ಉಪಯೋಗಿಸಿದರೆ 150 ಪೌಂಡು ಹತ್ತಿ ಬೆಳೆಯಿತು. ಆಮೇಲೆ ನೆಲಗಡಲೆ ಹಿಂಡಿ, 'ಸೂಪರ್‌ಫಾಸ್ಫೇಟ್ಸ್', 'ಕೈನಿಟ್' ತಲಾ ಅರ್ಧ ಟನ್ನಷ್ಟು ಹಾಕಿದರೆ 200 ಪೌಂಡು ಹತ್ತಿ ಅಂದರೆ ಒಂದಕ್ಕೆ **ನಾಲ್ಕು**ಪಟ್ಟು ಬೆಳೆಯಾಯಿತು.

ಸಕ್ರಮವಾಗಿ ಉಪಯೋಗಿಸಿದರೆ ದನದ ಗೊಬ್ಬರಕ್ಕಿಂತ ಖನಿಜ ಗೊಬ್ಬರ ಉತ್ತಮವಾದುದು. ಆದರೆ ತನ್ನ ಹೊಲಕ್ಕೆ **ಯಾವ** ಉಪ್ಪು ಹಾಕಬೇಕೆಂಬುದು ರಾಮನಿಗೆ ತಿಳಿಯಬೇಕಲ್ಲ. ನಮಗೆಲ್ಲರಿಗೂ ಒಂದೇ ಬಗೆಯ ಆಹಾರ ಸರಿಹೋಗು ತ್ತದೆಯೇ? ಹಾಗೆಯೆ ಎಲ್ಲಾ ನೆಲಕ್ಕೂ ಒಂದೇ ಗೊಬ್ಬರ ಸರಿಯಾಗದು. ತನ್ನ ಹೊಲಕ್ಕೆ ಯಾವುದು ಬೇಕೆಂಬುದು ರಾಮನಿಗೆ ಹೇಗೆ ಗೊತ್ತಾಗಬೇಕು? ರಸಾಯನಶಾಸ್ತ್ರ ಪಂಡಿತರು ಯಾರಾದರೂ ಮೊದಲು ಅವನ ಹೊಲದ ಮಣ್ಣನ್ನು ಪರೀಕ್ಷಿಸಿ ಅದರಲ್ಲಿ ಯಾವ ಉಪ್ಪು ಕೊರೆಯಾಗಿದೆಯೋ ತಿಳಿಸಬೇಕು. ಅದಕ್ಕೆ ಆ ಪಂಡಿತರಿಗೆ ರಾಮ ದುಡ್ಡು ಕೊಡಬೇಡವೆ!

ಒಂದುಸಲ ಆ ಪಂಡಿತರಿಗೆ ದುಡ್ಡುಕೊಟ್ಟು ತನ್ನ ಹೊಲಕ್ಕೆ ಗೊಬ್ಬರದ ಜೊತೆಗೆ ಯಾವ ಉಪ್ಪುಬೇಕೋ ರಾಮ ತಿಳಿದುಕೊಳ್ಳಲೂಬಹುದು. ಆದರೆ ಉಪ್ಪು ಹೇಗೆ ದೊರೆತೀತು? ಅದಕ್ಕೆ ದುಡ್ಡಿಲ್ಲವಲ್ಲ. ಎಲ್ಲಾ ಪೀಕಲಾಟವೆ. ಅವನಿಗೆ ಉಪ್ಪಿನ ಗೊಬ್ಬರವೊಂದು ಸಿಕ್ಕರೆ ಪೈರು ಬೆಳೆದಮೇಲೆ ಆ ಉಪ್ಪಿಗೂ ಇನ್ನೂ ಬೇರೆ ದಿನಸಿಗೂ ಸಾಕಾಗುವಷ್ಟು ಹಣ ಬಂದೇ ಬರುತ್ತದೆ. **ನಿಮಗೆ** ಗೊತ್ತಾಯಿತು ನೋಡಿ. ರಾಮನಿಗೆ ಲೆಕ್ಕ ಹಚ್ಚಿಕೊಂಡು ಗೊಬ್ಬರ ಕೊಟ್ಟರೆ ಸರಿ. ಅವನಿಗೆ ಉದ್ದರಿ ಬೇಕು. ಸದ್ಯ ಗೊಬ್ಬರದ ಕಡ ಬೇಕು. ಬೆಳೆ ಕೈಗೆ ಬಂದ **ತರುವಾಯ** ಅದನ್ನು ಹಿಂದಿರುಗಿ ಕೊಡುತ್ತಾನೆ. ಆದರೆ ಅವನಿಗೆ ಕಡ ಕೊಡುವವರು ಯಾರಿದಾರೆ? ಯಾರೂ ಇಲ್ಲ.

ಸರಿ. ನಗದು ಹಣ ತೆಗೆದುಕೊಳ್ಳದೆ ರಾಮನ ಹೊಲಕ್ಕೆ ಸಾಕಾಗುವಷ್ಟು ಗೊಬ್ಬರವನ್ನು ಯಾರಿಂದಲಾದರೂ ಕೊಡಿಸೋಣ. ಗೊಬ್ಬರವೇನೋ ಸಿಕ್ಕಿತು. ಇದು ಸಿಕ್ಕರೂ ಬೆರಣಿಗೆ ಬದಲು ಉರವಲಿಗಾಗಿ ಅವನಿಗೇನಾದರೂ ಬೇಕು ತಾನೆ? ಏನು ತರಬೇಕು? ಹಳ್ಳಿಗಳಲ್ಲಿ 'ಗ್ಯಾಸ್' ಇಲ್ಲ. ಇದ್ದಲು ಬಹಳ ತುಟ್ಟಿ.

ಸೌದೆಯೋ ? ನಮ್ಮ ದೇಶದಲ್ಲಿ ಬೇಕಾದಷ್ಟು ಸೌದೆಯಿದೆ. ಆದರೂ ಹಳ್ಳಿಗಳಲ್ಲಿ ಸೌದೆಯೇ ಕಾಣದು. ಬಹಳ ಸ್ವಲ್ಪವಿದೆ. ಸರಿಸರಿ, ಮುಂಬರಿವ ಮೊದಲು ಇನ್ನೊಂದು ಗಂಟು ಬಿಡಿಸಬೇಕಾಯ್ತು.

ಹಿಂದುಸ್ಥಾನದಲ್ಲಿ ಸಾಗುವಳಿಗೆ ಯೋಗ್ಯವಾದ ಭೂಮಿಯಲ್ಲಿ ಐದರಲ್ಲೊಂದು ಪಾಲು ಸಾರವಂತವಾದ ಅರಣ್ಯಪ್ರದೇಶ. ನಮ್ಮ ಅಮೂಲ್ಯ ನಿಧಿಗಳಲ್ಲಿ ಅದೂ ಒಂದು. 10 ಕೋಟಿ ಎಕರೆ ನೆಲವನ್ನು ವ್ಯಾಪಿಸಿ ವರುಷಕ್ಕೆ 60 ಕೋಟಿ ಬೆಲೆಯ ಪದಾರ್ಥಗಳನ್ನು ನಮಗೆ ಕೊಡುತ್ತದೆ ಈ ಅರಣ್ಯ. ನಮ್ಮ ನೆಲ ಗಾಳಿಗೆ ಗಿಡಬಳ್ಳಿ ಬಹಳಬೇಗ ಬೆಳೆಯುತ್ತವೆ. ವರುಷವರುಷವೂ 10 ಕೋಟಿ ಟನ್ ಸೌದೆ ಕಡಿದರೂ ನಮ್ಮ ಕಾಡು ತೆಳ್ಳಗಾಗುವ ಹಾಗಿಲ್ಲ. ಗೋಂಡರು ಹಾಡುವ ಅರಣ್ಯಗೀತೆಯೊಂದು ಕೇಳಿರಿ.

'ಮಾವು ನೆಡು ಹುಣಿಸೆ ನೆಡು ನೆಡು ಬಾಳೆ,
ತೂಗ್ಯಾವು ತನಿವಣ್ಣು ರೆಂಬೆಮೇಲೆ ;
ಮಂದಾರ ಹತ್ತ ಚಚ್ಚ ಹೂವೀಗೆ
ತುಳಸೀಯ ಬೆಳಸಲ್ಲಿ ತೋಟ್ದಾಗೆ.
ನೀರ್ದನಿಸು ಬಿಡಧಾಂಗೆ
ಬಾಡ್ಯಾವು ಸಿಲಧಾಂಗೆ.
ಅಡವೀಯ ಗಿಡವೆಲ್ಲ ಬೆಳದಾವೊ
ಕಡುನಂಬಿ ಮ್ಯಡನನ್ನ ಸಿಂತಾವೊ ;
ಬಾಡಾವು ಬಾಡಾವು ಕಾಡಸಸಿ
ಬೆಳದಾವು ಬೆಳದಾವು ದೇವಸಸಿ.'

ನಮ್ಮ ದೇಶದ ಅರಣ್ಯವೆಲ್ಲ ಹಿಮಾಲಯ ಪರ್ವತದಲ್ಲಿದೆಯೆಂದು ಕೆಲವರು ತಿಳಿಯುತ್ತಾರೆ. ಅದು ಸರಿಯಲ್ಲ. ನಮ್ಮ ಪುಣ್ಯ ಚಲೋದು. ಇಲ್ಲದಿದ್ದರೆ ಹಿಮಾಲಯದಿಂದ ಮದರಾಸಿಗೆ ಸೌದೆ ಸಾಗಿಸುವುದೆಂದರೆ ಎಷ್ಟು ತುಟ್ಟಿಯಾಗುತ್ತಿತ್ತು! ಹಿಂದುಸ್ಥಾನದ ಎಲ್ಲ ಭಾಗಗಳಲ್ಲಿಯೂ ಅಡವಿ ಒಂದೇ ಸಮನಾಗಿ ಹರಡಿಲ್ಲ. ಹಿಮಾಲಯದ ಅಡವಿಗಳಲ್ಲಿ ಉತ್ತಮವಾದ ದೇವದಾರು ಸಿಂಗಾಡ (ಚೆಸ್ಟ್‌ನಟ್), 'ಓಕ್', 'ಸರ್ವೆ' ಮರಗಳೂ ಬಿದಿರು ಮೆಳೆಗಳೂ ಇವೆ.

ಸಿಂಧ್ ರಾಜಪುತ್ರಾನಗಳಲ್ಲಿ ಅಡವಿಯೇ ಇಲ್ಲ. ಇಡೀ ಹಿಂದುಸ್ಥಾನವನ್ನು ನೋಡಿದರೆ ಸೌದೆಯ ಅಡವಿ ಎಲ್ಲಿಯೂ ಜನವಸತಿಗೆ 100 ಮೈಲಿಗಿಂತ ದೂರವಿದ್ದುದು ಕಾಣದು. ಮಳೆ ಸಮೃದ್ಧಿಯಾದ ಕಡೆ ತಾಳೆ, ಬಿದಿರು, ರಬ್ಬರು, 'ಫರ್ನ್' ಗಿಡಗಳಿಂದ ಅಡವಿ ಸದಾ ಹಸಿರಾಗಿರುತ್ತದೆ. ಎತ್ತರವಾದ ಪರ್ವತಗಳ ಮೇಲೆ ದೇವದಾರೂ, ತಪ್ಪಲಿನಲ್ಲಿ ತೇಗು ಬೊಬ್ಬಳಿಯೂ ಬೆಳೆಯುತ್ತವೆ.

ಕಾಡಿನಿಂದ ಹಳ್ಳಿಗಳಿಗೆ ಸೌದೆ ಸಾಗಿಸಲು ಕೆಲವುಕಡೆ ರಸ್ತೆಯನ್ನೋ ರೈಲು ದಾರಿಯನ್ನೋ ಮಾಡಬೇಕಾಗಿ ಬರಬಹುದು. ನಮ್ಮ ಬೆಳೆ ನೂರಕ್ಕೆ 20 ರಷ್ಟು ಹೆಚ್ಚಾದರೆ ನಮಗೆ ಅಗತ್ಯವಾದ ರಸ್ತೆ ರೈಲು ಎಲ್ಲವನ್ನೂ ಮಾಡಿಕೊಳ್ಳಲು ಸಾಕಾದಷ್ಟು ಹಣ ಒದಗುತ್ತದೆಯೆಂದು ಒಬ್ಬ ಇಂಗ್ಲಿಷ್ ಇಂಜನಿಯರರು ಹೇಳಿದಾರೆ. ಸರಿಯಾಗಿ ಗೊಬ್ಬರ ಹಾಕಿದರೆ 20ರಷ್ಟೇಕೆ ನೂರಕ್ಕೆ 200–300ರಷ್ಟು ಹೆಚ್ಚಾಗಿ ಬೆಳೆಯಾಗುತ್ತದೆಂಬುದನ್ನು ನಾವು ಕಾಣೆವೆ?

ಆದರೆ ಅಷ್ಟೆಲ್ಲ ಸಗಣಿಗೆ ಬದಲು ಸೌದೆ ಒದಗಿಸಲಾದೀತೇ? ಕೊಂಚ ಲೆಕ್ಕಮಾಡಿದರೆ ಉತ್ತರ ಬರುತ್ತದೆ. ಸಾಮಾನ್ಯವಾಗಿ ನಮ್ಮ ಹಳ್ಳಿಜನರಿಗೆ ತಲೆಗೊಂದು ದನವಿದೆ. ರಾಮನ ಕುಟುಂಬಕ್ಕೆ ಐದು ದನ ಇವೆ. ಆ ದನ ಅವನಿಗೆ ವರ್ಷಕ್ಕೆ (5×1¾ ಟನ್) 8¾ ಟನ್ ಗೊಬ್ಬರ ಕೊಡುತ್ತವೆ. ಎರಡೇ ಟನ್ ಒಣಕಟ್ಟಿಗೆಯಾದರೆ ಸಾಕು; ಅಷ್ಟು ಸೌದೆಯಾಗುತ್ತದೆ.

ಹಿಂದುಸ್ಥಾನದ ಹಳ್ಳಿಗಳಲ್ಲಿ ರಾಮನ ಕುಟುಂಬದಂಥವು 3 ಕೋಟಿ 40 ಲಕ್ಷ ಇವೆ. ಅವರಿಗೆಲ್ಲ ಸೌದೆ ಬೇಕು. ಒಟ್ಟು 6 ಕೋಟಿ 80 ಲಕ್ಷ ಟನ್ ಕಟ್ಟಿಗೆ ಬೇಕು. ನಮ್ಮಲ್ಲಿ ಅಷ್ಟು ಕಟ್ಟಿಗೆ ಸಿಗುತ್ತದೆಯೆ? ಸಿಗುತ್ತದೆಯೆಂದು ಹೇಳಬೇಕು. ಆಗಲೇ ನಮಗೆ ತಿಳಿದಿದೆ, ನಮ್ಮ ಕಾಡನ್ನು ಹಾಳುಮಾಡದೆಯೆ 10 ಕೋಟಿ ಟನ್ ಸೌದೆ ಕಡಿದುಕೊಳ್ಳಬಹುದೆಂದು. ನಮಗೆ ಸಾಕಾಗಿ ಇನ್ನೂ 3 ಕೋಟಿ 20 ಲಕ್ಷ ಟನ್ ಉಳಿಯುತ್ತದೆ!

ಹೀಗೆಂದರೆ ನಮ್ಮ ಅಡವಿಗಳ ವಿಷಯವೆಲ್ಲ ಅಚ್ಚುಕಟ್ಟಾಗಿದೆಯೆಂದಲ್ಲ. ಅದರಿಂದ ನಮಗೆಷ್ಟು ಬರಬೇಕೋ ಅಷ್ಟು ಬರುತ್ತಿಲ್ಲ. ಈಗಲೂ ನಮ್ಮ ಅಡವಿ

ಬೇಕಾದಷ್ಟಿದ್ದರೂ ಹಿಂದೆ ಇಷ್ಟು ಹೆಚ್ಚಾಗಿದ್ದವು. ಪೂರ್ವದಲ್ಲಿ ಹಿಂದುಸ್ಥಾನದ ಅನೇಕ ಪ್ರದೇಶ ದಟ್ಟವಾದ ಕಾಡಿನಿಂದ ತುಂಬಿದ್ದವು. ಅದರ ಬೆಲೆ ಗೊತ್ತಾಗುವ ಮೊದಲೇ ತೇಗದ ಮುಟ್ಟಿಗಾಗಿಯೋ, ಸಾಗುವಳಿಗೆ ಹುಲ್ಲುಗಾವಲಿಗೆ ಭೂಮಿ ಬೇಕೆಂದೋ, ಹಾಗೂ ಹೀಗೂ ನಮ್ಮ ಅಡವಿ ಮುಕ್ಕಾಲು ಮೂರುವೀಸ ಪಾಲು ನಷ್ಟವಾಗಿ ಹೋಯಿತು.

ಇದರಿಂದಾಗುವ ದುಷ್ಪರಿಣಾಮಗಳಲ್ಲಿ ನೆಲ ಕೊಚ್ಚಿ ಹೋಗುವುದೊಂದು. ಇದು ಮೂರು ಬಗೆಯಲ್ಲಾಗುತ್ತದೆ. ನದಿಗಳು ತಮ್ಮ ದಡದ ನೆಲವನ್ನು ಕೊರೆದು ಕೊರೆದು ಎಷ್ಟೋ ಭೂಮಿಯನ್ನು ನಾಯಮಾಡುತ್ತವೆ. ಬಲವಾದ ಮಳೆ ಬಂದರೆ ನೆಲದ ಮೇಲಿನ ಮಣ್ಣಿನ ಪದರ ಕೊಚ್ಚಿಕೊಂಡು ಹೋಗಿ ಒಳಗಿನ ಕಲ್ಲು ತೇಲಿಕೊಳ್ಳುತ್ತವೆ. ನೆಲದ ಮೇಲಿನ ಹುಡಿ ಬಿರುಸಾದ ಗಾಳಿಗೆ ಧೂಳಾಗಿ ಹಾರಿಹೋಗುತ್ತದೆ.

ಹಿಂದುಸ್ಥಾನದ ವಾಯುವ್ಯ ಭಾಗದಲ್ಲಿದ್ದ ಅಡವಿಗಳಲ್ಲಿ 400 ವರ್ಷದ ಕೆಳಗೆ ಮೊಗಲ ಬಾದಷಹ ಬಾಬರನು ಖಡ್ಗಮೃಗಗಳ ಬೇಟೆಯಾಡುತ್ತಿದ್ದ. ಈಗ ಆ ಭಾಗವೆಲ್ಲ ನೀರೇಯಿಲ್ಲದೆ ಬರೀ ಕೊಳ್ಳ ಮರಡಿಗಳ ಸಾಲಾಗಿದೆ. 57ನೆಯ ಪುಟದಲ್ಲಿರುವ ಚಿತ್ರದಲ್ಲಿ ಈ ವ್ಯತ್ಯಾಸವನ್ನು ನೋಡಿರಿ.

ಸಂಯುಕ್ತ ಪ್ರಾಂತದ ಕೆಲವು ಭಾಗದಲ್ಲಂತೂ ನೆಲ ಬಹಳೇ ಕೊಚ್ಚಿ ಹೋಗಿದೆ. ಮಳೆಗಾಲದಲ್ಲಿ ಪರ್ವತಗಳ ಮೇಲಿಂದ ಕೆಳಗೆ ಧುಮುಕಿ ಹರಿವ ನೀರಿನ ಹೊಡೆತಕ್ಕೆ ಯಮುನೆಯಂಥ ಮಹಾನದಿಯ ತಳವೂ ಕೂಡ ಈ 500 ವರ್ಷದಲ್ಲಿ 50 ಅಡಿ ಕೆಳಕ್ಕೆ ಇಳಿದಿದೆ. ಅದೇ ಮೊದಲಿನ ಹಾಗೆ ಗುಡ್ಡಗಳ ತುಂಬ ಅಡವಿಗಳಿದ್ದಿದ್ದರೆ ಮಳೆನೀರಿನ ಇಳಿತದ ವೇಗವನ್ನು ತಡೆದುಬಿಡುತ್ತಿದ್ದವು. ಯಮುನಾ ನದಿ ಇಷ್ಟು ಒಳಕ್ಕಿಳಿದು ಹೋಗುತ್ತಿರಲಿಲ್ಲ.

ಇಟಾವಾ ಎಂಬುದೊಂದು ಜಿಲ್ಲೆ. ವರ್ಷಕ್ಕೆ 250 ಎಕರೆಯಂತೆ ಆ ಜಿಲ್ಲೆ ಭರಭರ ಮರಳುಗಾಡಾಗುತ್ತ ನಡೆದಿತ್ತು. ಅಲ್ಲಿ ನೆಲ ಕೊಚ್ಚಿ ಹೋಗುವುದನ್ನು ನಿಲ್ಲಿಸಲಿಕ್ಕೆ ಮೇವು ಸೌದೆ ಬೆಳೆಯಲಿಕ್ಕೆ ಹೊಸದಾಗಿ ಗಿಡಗಳನ್ನು ನಾಟಿ ಅಡವಿ ಬೆಳೆಯಿಸಿದರು. ತೇಗ ಬೊಬ್ಬುಳಿ ಹಿಂಪಾ ಮುಂತಾದ ಗಿಡಗಳನ್ನು ನಾಟಿದರು.

ಮೂರೇ ವರ್ಷದಲ್ಲಿ ಅವು ಮೂರು ನಾಲ್ಕಾಳುದ್ದ ಬೆಳೆದು ಚಲೋ ತೋಪು ಕಂಡಹಾಗೆ ಕಾಣುತ್ತಿದ್ದವು.

ಇದೆಲ್ಲ ಬಹಳ ಅಗ್ಗವಾಗಿ ಎಕರೆಗೆ ಇಪ್ಪತ್ತೇಳೇ ರೂಪಾಯಿಗೆ ಆಯಿತು. ಅಡವಿಯಿಂದ ನಮ್ಮ ಮನೆಗೆ ಸೊಗಸಾದ ಮುಟ್ಟು ಸೌದೆ ಮೇವು ಅಂಗು 'ಟರ್ಪೆಂಟೈನ್' ರಾಳ ರಬ್ಬರ್ ಮೊದಲಾದ ಕಚ್ಚಾ ದಿನಸೂ ತೊಗಲು ಹದಮಾಡುವ ಸಾಮಗ್ರಿಯೂ ಸಿಗುತ್ತವೆ. ಬಿಸಿಲಿನ ಝಳಕ್ಕೆ ನೆರಳೂ ಬೇಸಿಗೆಯುರಿಗೆ ತಂಪೂ ಆಗುತ್ತವೆ. ಮಳೆಗಾಲದಲ್ಲಿ ನದಿಗಳು ಉಕ್ಕಿ ಬಾರದಂತೆ ನೀರು ಕೊರೆಯದಂತೆ ಅಡ್ಡಿಮಾಡಿ, ನೆಲ ಕೊಚ್ಚಿಹೋಗದಂತೆ ತಡೆದು ಮಳೆಯನ್ನು ಕೂಡ ಹೆಚ್ಚಿಸುತ್ತದೆ.

ಅಡವಿಯ ಪದಾರ್ಥಗಳಿಂದ ಅನೇಕ ಸಾಮಾನು ತಯಾರಾಗುತ್ತವೆ. ನಮ್ಮ ನಾಡಿನಲ್ಲಿ ಎಷ್ಟೋ ರೋಗರುಜಿನವಿದೆ. ಅದಕ್ಕೆ ಔಷಧ ಬೇಕು. ನಮ್ಮ ಅಡವಿಗಳಲ್ಲಿ ಬೇರುಗಳದೊಂದು ಔಷಧಸಂಗ್ರಹವೇ ಇದೆ.

ರಬ್ಬರು ನೋಡಿರಿ. ಒಂದಾನೊಂದು ಕಾಲಕ್ಕೆ ಸೀಸದಕಡ್ಡಿ ಗುರುತು ಅಳಿಸಲು ಮಾತ್ರವೇ ರಬ್ಬರ್. ಅದರಿಂದಲೇ ಅದಕ್ಕೆ ಈ ಹೆಸರು ಬಂದುದು. ಅದೇ ಈಗ ರಬ್ಬರಿಲ್ಲದೆ ಹೋದರೆ ನಾವು ಕತ್ತಲೆಯಲ್ಲೂ ನಿಶ್ಶಬ್ದದಲ್ಲೂ ಮುಳುಗಬೇಕಾದೀತು! ವಿದ್ಯುತ್ತನ್ನು ಸಮಗಾಗಿ ಸೆರೆಹಿಡಿವುದು ರಬ್ಬರು. ಅದಿಲ್ಲದಿದ್ದರೆ ಬೀದಿ ದೀಪ ಆರಿಹೋದಾವು, 'ಟೆಲಿಫೋನ್' ಟ್ರಿಂಗ್ ಟ್ರಿಂಗ್ ಬಾರಿಸಲಿಕ್ಕೇ ಇಲ್ಲ.

ಈ ಪುಸ್ತಕ ಅಚ್ಚಾಗಿರುವ ಕಾಗದವನ್ನೇ ತೆಗೆದುಕೊಳ್ಳಿ. ಇದೆಲ್ಲಿಂದ













ವಿದ್ಯುದವಾಹಕ    ಕೆರದ ಹಿಮ್ಮಡ    ತಾಡಪಾಲ-ಗುಡಾರ



ಕೈಚೀಲ





ಟೈರು

ನೀರ್ಗವಚೆ (ವಾಟರ್ ಪ್ರೂಫ್)

ಬಂತು ಗೊತ್ತೆ? ಉರಿಯಾ ಪ್ರಾಂತದ ಅಡವಿಯಿಂದ. ಅಲ್ಲಿ ಬೆಳೆದ ಬಿದುರಿನಿಂದ ಇದು ಮಾಡಲ್ಪಟ್ಟಿದೆ.

ರಷ್ಯಾದ ಚಿಕ್ಕ ಕವಿತೆಯೊಂದನ್ನು ನಿಮಗೆ ಹೇಳಿದರೆ ನಮ್ಮ ಅಡವಿಗಳಲ್ಲಿ ಏನೇನು ಸಿಗುತ್ತದೆಂಬುದು ತಿಳಿಯುತ್ತದೆ. 'ಮಾಸ್ಕೋ ಯೋಜನೆ' (*Moscow Has a Plan*) ಎಂಬ ಹುರುಪುಗೊಳಿಸುವ ಪುಸ್ತಕದಲ್ಲಿ ಇದೆ. ಆ ಪುಸ್ತಕ ಓದಿದರೆ ನಿಮಗೆಲ್ಲ ಸಂತೋಷವಾದೀತು.

ಇಷ್ಟೆಲ್ಲ ಲಾಭವನ್ನು ಗಮನಿಸಿದರೆ ಇದ್ದ ಅಡವಿಯನ್ನು ಕಾಪಾಡಿಕೊಂಡು ಹೊಸವನ್ನು ಬೆಳೆಸಿದರೆ ನಮ್ಮ ನಾಡಿನ ಸಂಪತ್ತು ವೃದ್ಧಿಯಾಗದೆ? ಹಳ್ಳಿಯ ಸೆರೆಯಲ್ಲಿ ಇದಕ್ಕಾಗಿ ಕೊಂಚ ನೆಲವನ್ನು ಬಿಟ್ಟು ಅದಕ್ಕೆ ಸರಿಯಾಗಿ ನೀರೊದಗಿಸಿದರೆ ಮೂರು ನಾಲ್ಕು ವರ್ಷದಲ್ಲಿ ಆ ಹಳ್ಳಿಗೆಲ್ಲ ಬೆರಣಿಗೆ ಬದಲಾಗಿ ಬಳಸಲು ಎಷ್ಟು ಬೇಕೋ ಅದಕ್ಕಿಂತ ಹೆಚ್ಚಾಗಿ ಸೌದೆ ಕೊಡುವ ಕಾಡು ಬೆಳೆದೀತು. ಹಳ್ಳಿಹಳ್ಳಿಗೆ ಅಥವಾ ಒಂದೊಂದು ಗುಂಪಿಗೆ ಆ ಭೂಮಿಯ ಮೂವತ್ತರಲ್ಲಿ ಒಂದು ಪಾಲು ನೆಲವನ್ನು ಇದಕ್ಕಾಗಿ ಬಿಟ್ಟು ಅಲ್ಲಿ 'ಯೂಕಲಿಪ್ಟಸ್' ಗಿಡಗಳನ್ನು ಬೆಳೆಸಿದರೆ ಆ ಹಳ್ಳಿಗಳಿಗೆ ಬೇಕಾದಷ್ಟು ಸೌದೆಯಾದೀತು.

ಇಷ್ಟು ಸಾಕು. ಇನ್ನು ರಾಮನ ಬಳಿಗೆ ಹೋಗಿ ಅವನ ಸಮಸ್ಯೆ ಪರಿಹರಿಸಲು ಎಷ್ಟು ಬೇಕೋ ಅಷ್ಟು ತಿಳಿದುಕೊಂಡಿದೇವೆ.

ಅವನಿಗೆ ನಾವು ಮೊದಲು ಹೇಳಬೇಕಾದುದು: ತಮ್ಮ ಊರಿನವರನ್ನೆಲ್ಲ ಒಟ್ಟುಗೂಡಿಸಿ ತಮ್ಮೂರಿನ ಹೊಲಗಳಲ್ಲಿ ಒಂದು ತಾಕನ್ನು—30 ರೊಳಗೊಂದು ಪಾಲನ್ನು—ಪ್ರತ್ಯೇಕವಾಗಿರಿಸಿ ಅದರಲ್ಲಿ ಒಳ್ಳೇ ಗಿಡಗಳನ್ನು ಬೆಳೆಸುವ ಕೆಲಸ. 2–3 ವರ್ಷಗಳಲ್ಲಿ ಆ ಗಿಡ ಸೌದೆಗೆ ಉಪಯೋಗವಾಗುವ ಹಾಗೆ ಬೆಳೆಯುತ್ತವೆ.

ಅಲ್ಲಿಯ ತನಕ ರಾಮು ಬೆರಣಿ ಸುಡಲೇಬೇಕೇನು? ಇಲ್ಲ. ಈ ಮಧ್ಯ ಕಾಲದಲ್ಲಿ ಸೌದೆ ಕೊಳ್ಳಲು ಅವನಿಗೆ ಹಣ ಬೇಕು. ಅವನಲ್ಲಿ ಹಣವೆಂಬುದೇ ಇಲ್ಲ. ಅವನು ಹೊಲಕ್ಕೆ ಗೊಬ್ಬರಹಾಕಿ ಪೈರು ಬೆಳೆಸಿ ಹಣ ಕೊಡುವತನಕ ಅವನಿಗೆ ಯಾರಾದರೂ ಸಾಲ ಕೊಡುವವರು ಬೇಕು. ಇದು ಸರಕಾರದ ಕೆಲಸವೆಂದು

ಬೆಳೆಸಲಡವಿ
ಏನು ನೆಡುವ?
ಕಡಲ ಸುಳಿವ
ಹಡಗ ಕಂಬ
ತೊಲೆಯು ನೆಡುವ
ಜಂತೆ ಬೆಳೆವ
ಹಳ್ಳ ಹರಿವ
ಬಳಿ ಸೇತುವೆ
ಬೆಳೆಸಲಡವಿ
ಏನ ಪಡೆದಿ?
ಮುಗಿಲ ನೇರ್ವ
ಹಗುರ ರೆಕ್ಕೆ
ಮನೆಗೆ ಕಿಟಕಿ
ನೆಲಕೆ ಹಲಗೆ
ಮೇಜು ಕರಡು
ಪುಸ್ತ ಕೆರಡು



ನನಗನಿಸುತ್ತದೆ. ಆದರೆ ನಮ್ಮ ದುರ್ದೈವ! ರಾಮುವಿಗೆ ಸೌದೆಗಾಗಿ ಕೊಡಲಿಕ್ಕೆ ನಮ್ಮ ಸರಕಾರಕ್ಕೆ ಹಣವಿಲ್ಲ. ರಾಮು ಯಾವುದಾದರೂ ಸಹಕಾರ ಸಂಘದ ಸದಸ್ಯನಾಗಿದ್ದರೆ ಆ ಸಂಘವಾದರೂ ಸಾಲ ಕೊಟ್ಟೀತು. ಹಾಗೆ ಅದೃಷ್ಟ ವಶದಿಂದ ಸಾಲ ಸಿಕ್ಕರೆ ಅವನ ಹೊಲದಲ್ಲಿ ಆಗುವ ದುಪ್ಪಟ್ಟು ಬೆಳೆಯಿಂದ ಸಾಲ ಬೇಗನೆ ತೀರಿಸಿಬಿಡುತ್ತಾನೆ. ಇದರ ಜೊತೆಗೆ ಮೂರು ವರ್ಷದೊಳಗಾಗಿ ಅವನಿಗೂ ಅವನ ಸಂಗಾತಿಗಳಿಗೂ ಬೇಕಾಗುವಷ್ಟು ಸೌದೆಯೊದಗಿಸುವ ಕಾಡೊಂದು ಬೆಳೆದುಬರುತ್ತದೆ.

ಆಗ ಅವರು ಹೆಚ್ಚು ಸಿರಿವಂತರಾಗರೆ? ಹೌದು ಆಗುತ್ತಾರೆ. ಆದರೆ ಕೆಲವು '**ರೆ**'ಗಳು ಇದಕ್ಕೆ ಅಂಟಿಕೊಂಡಿವೆ. **ರೆ** ರಾಜ್ಯದ ಕಂತೆ ಅದು. ಗಿಡ ಬೆಳೆಸಲು ಕೊಂಚ ನೆಲ ಬಿಡಬೇಕೆನ್ನುವ ಬುದ್ಧಿ ರಾಮುವಿಗೂ ಅವನ ಜೊತೆಗಾರರಿಗೂ ಹೊಳೆದ-**ರೆ**, ಅವನಿಗೆ ಯಾರಾದರೂ ಸಾಲ ಕೊಟ್ಟ-**ರೆ**, ಎಲ್ಲಕ್ಕಿಂತ ಹಿರಿಯ-**ರೆ** ಸಕಾಲಕ್ಕೆ ಮಳೆ ಬಂದ-**ರೆ** ಅಲ್ಲವೆ! ಇಲ್ಲದಿದ್ದರೆ ನೀರಿಲ್ಲದೆ ಬೀಜ ಬೆಂದು ಹೋಗುವ ನೆಲದಲ್ಲಿ ಗೊಬ್ಬರ ಹಾಕಿತಾನೆ ಏನುಪಯೋಗ? ಹಾಗಾದ-**ರೆ** ರಾಮುವಿಗಾಗಿ ನಾವು ಹಾಕಿದ ಹೊಂಚಿಕೆಯೆಲ್ಲ ಎಲ್ಲ ಮಾನವಪ್ರಯತ್ನದಂತೆ ವ್ಯರ್ಥವಾದಾವು!

VI

# ಆದರೆ ಗೀದರೆ

'ಕಾಲಮೇಘ ಇಳಿದು ಬಾರ, ಹೂವಿನೊಡಲವೋಡ ಬಾರ,
ಧೂಳಿವೋಡ ಅರಳೆವೋಡ ನಿನ್ನ ಬೆಮರ ಸುರಿಸುಬಾರ!

ಕುರುಡುವೋಡ ಬಾರ, ಕಿರಿಯವೋಡವೆರಡು ಆರ ತಾರ,
ಹರಡು ತಣಿವ ಸುರಿಸಿ ಹಸಿಯು, ನೆಲ್ಲಬೋನಸವಿಯು ಬೀರ!

ನೆಟ್ಟವೋಡ ಗಟ್ಟವೋಡ, ಬಾರಬಾರ ಕಳ್ಳವೋಡ,
ನತ್ತ ಮಾರಿ ನನ್ನ, ಛತ್ರಿತರುವೆ ನಿನ್ನ ತಲೆಗೆ ನೋಡ!

ಮೂಲೆಸೇರಿ ಮುಟ್ಟು ಮುಂಕು, ಹೂವಮಳೆಯಿ ಮೆಲನೆ ಸಾರು.
ಬಿಸಿಲ ಬೇಗೆ ಗೌಡ ಸಾಯ್ಲು ತಂಪು ನಗೆಯು ಮೊಗವ ತೋರು!'

ಈ ಹಳ್ಳಿಹುಡುಗಿಯರ ಹಾಡು ಚೆನ್ನಾಗಿಲ್ಲವೆ? ಇದು ಜಾಸಿಮುದ್ದೀನ್ ಕವಿ ಬರೆದ ಬಂಗಾಲಿ ಹಾಡಿನದೊಂದು ನುಡಿ. ಹಳ್ಳಿಹುಡುಗ ಹುಡುಗಿಯರ ಒಲವಿನ ಸುಂದರ ಕನಸು. ಸರಲ ಸ್ವಭಾವದ ಹಳ್ಳಿಜನ ನಮ್ಮ ಕಣ್ಣೆದುರಿಗೆ ಬಂದು ನಿಂತ ಹಾಗೆ ಆಗುತ್ತದೆ. ಈ ಹಾಡಿನಲ್ಲಿ ಹೇಳಿದಹಾಗೆ ಅವರ ಮುಖ್ಯ ಚಿಂತೆಗಳಲ್ಲಿ ಮಳೆಯ ಚಿಂತೆಯೂ ಒಂದು. ಕೆಲವು ಸಲ ಹಳ್ಳಿಯ ಜನರೆಲ್ಲ ಸೇರಿ ಮಳೆಗಾಗಿ ಪ್ರಾರ್ಥನೆಮಾಡುತ್ತಾರೆ.

ಹೀಗೆ ಮಳೆಯನ್ನೇ ಪೂರಾ ನೆಚ್ಚಿಕೊಂಡಿರುವುದು ಹಿಂದುಸ್ಥಾನದ ವೈಶಿಷ್ಟ್ಯ. ನಮ್ಮ ಜನರ ಬದುಕಿನಲ್ಲಿ ಮಳೆಗೆಷ್ಟು ಮಹತ್ವವಿದೆಯೋ ಅದು ಪರದೇಶದವರಿಗೆ ಅರ್ಥವೇ ಆಗುವಂತಿಲ್ಲ. ಮಳೆಯೆಂದರೆ ಎಷ್ಟು ಮುಖ್ಯವೋ ನಮ್ಮ ಒಕ್ಕಲಿಗರಿಗೆ ಚೆನ್ನಾಗಿ ಗೊತ್ತಿದೆ.

ಆದುದರಿಂದಲೇ ಹಿಂದಿನ ಪ್ರಕರಣದಲ್ಲಿ ಹೇಳಿದುದು 'ಹೊಲಕ್ಕೆ ಹಾಕಿದ

ಗೊಬ್ಬರ ಒಂದಕ್ಕೆ ಮೂರರಷ್ಟು ಬೆಳೆಕೊಡುವುದು ಮಳೆ ಸಕಾಲಕ್ಕೆ ಸಾಕಷ್ಟು ಬಂದ—ರೆ' ಎಂದು.

ಮುಂಗಾರು ಹಿಂಗಾರು ಮಳೆ ನಮ್ಮ ಭೂಮಿಗೆ ಜಲದಾನ ಮಾಡುವ ಮಹಾಕಾರ್ಯವನ್ನು ಮಾಡದಿದ್ದರೆ ನಮ್ಮ ನೆಲದಲ್ಲಿ ಬೆಳೆಯಾಗುತ್ತಿರಲಿಲ್ಲ. ಎರಡು ಬಗೆಯಲ್ಲಿ ಈ ಕಾರ್ಯ ನಡೆಯುತ್ತದೆ. ಒಂದು—ದೇಶದಲ್ಲೆಲ್ಲ ಬೀಳುವ ಮಳೆಯಿಂದ; ಎರಡು—ಬೆಟ್ಟಗಳಿಂದಿಳಿದು ಮೈದಾನದಲ್ಲಿ ಹರಿವ ಹೊಳೆಗಳ ಪ್ರವಾಹವನ್ನು ಬಳಗೊಳಿಸುವ ಕೆಲಸದಿಂದ.

ಇವೆರಡರಲ್ಲಿ ಮೊದಲನೆಯ ಕೆಲಸ ಬಹಳ ಮುಖ್ಯ. ಏಕೆಂದರೆ ನದಿಗಳು ದೇಶದ ಎಲ್ಲಾ ಭೂಮಿಗೂ ನೀರೊದಗಿಸವು. ಹಾಗೆ ಮಾಡಲಿಕ್ಕೆ ನದಿಗಳೂ ಸಾಕಷ್ಟಿಲ್ಲ. ಎಷ್ಟೋ ವಿಶಾಲ ಪ್ರಾಂತಗಳಲ್ಲಿ ನದಿಗಳೇ ಇಲ್ಲ. ಹೀಗಾಗಿ ಅನೇಕ ಕಡೆ ಖುಷ್ಕಿಹೊಲಕ್ಕೆ ಬೇಕಾದ ನೀರಿಗೆ ಮಳೆಯೊಂದೇ ಗತಿ. ಉತ್ತರ ಸಿಂಧ್ ಪ್ರಾಂತದಂಥ ಕಡೆ ಆ ಮಳೆನೀರಿಗೂ ಅಭಾವ.

ಕೆಲವು ಕಡೆ ಮಳೆಬಂದರೂ ಹೊತ್ತುಗೊತ್ತು ಇಲ್ಲದೆ ಬರೋಣ, ಬಾರದೆಯೆ ಹೋಗೋಣ, ಹೀಗೆ ಅದರ ವಕ್ರಲೀಲೆ ಬಹಳ; ಈಗಳಿಗೆ ಚಲೋ ಮನಸು, ಮರುಗಳಿಗೆ ಕೆಡುಕು ಬುದ್ಧಿ ಮಾಡಿಕೊಳ್ಳುತ್ತ ಚೆಲ್ಲಾಟವಾಡುವ ರಕ್ಕಸನ ಹಾಗೆ. ಈ ವರ್ಷ ಅತಿವೃಷ್ಟಿ ಮುಂದಿನ ವರ್ಷ ಅನಾವೃಷ್ಟಿ! ಈ ವರ್ಷ ಗುಜರಾತಿನಲ್ಲಿ ವಿಶೇಷಮಳೆ, ಮಹಾಕೋಸಲದಲ್ಲಿ ಕಡಮೆಯೆಂದರೆ ಶೂನ್ಯವೆ. ಬರುವ ವರ್ಷ ತಿರುವುಮುರುವು; ಮಹಾಕೋಸಲದಲ್ಲುಂಟು, ಗುಜರಾತಿನಲ್ಲಿ ಹೆಸರೇಯಿಲ್ಲ! ಒಂದೊಂದು ವರ್ಷ ಮೊದಮೊದಲಿಗೆ ನಾಲ್ಕುಹನಿ ಉದುರಿ ಮುಂದೆ ಮುಖವೇ ತೋರಿಸದು. ಅದರ ಮುಂದಿನ ವರ್ಷ ತಡವಾಗಿ ಮಳೆಯಾದರೂ ಬೇಗ ನಿಲ್ಲದು! ನಮ್ಮ ದೌರ್ಭಾಗ್ಯಕ್ಕೆ ಸರಿಯಾಗಿ ಇಂಥ ವರ್ಷ ಇಂಥ ಕಾಲದಲ್ಲಿ ಮಳೆಯಾಗುತ್ತದೆಂದು ಹೇಳುವವರು ಯಾರೂ ಇಲ್ಲ. ಸದಾ ಗಾಳಿಯ ಗತಿಯನ್ನೆ ಪರೀಕ್ಷಿಸುತ್ತಿರುವ ಸರಕಾರಿ ತಜ್ಞರು ಸಹ ಹೇಳಲಾರರು. ವರ್ಷವರ್ಷವೂ ಮುಗಿಲಕಡೆ ಮೋರೆ ಮಾಡಿಕೊಂಡು ಒಕ್ಕಲಿಗನು ಮಳೆಯ ದಾರಿ ಕಾಯಬೇಕಾದುದೇ. ಪ್ರತಿ ವರ್ಷವೂ ಇದೊಂದು ದೊಡ್ಡ

ಜೂಜಾಟ, ಅದೃಷ್ಟ ಪರೀಕ್ಷೆ. ಇಷ್ಟವೋ ಅನಿಷ್ಟವೋ ಈ ಜೂಜಿಗೆ ನಮ್ಮ ರೈತ ಸೇರಲೇಬೇಕು. ಮಳೆಗಾಲ ಮುಗಿದ ಮೇಲೆ ಕುಬೇರನಾದರೂ ಸರಿಯೆ ಕುಚೇಲನಾದರೂ ಸರಿಯೆ. ಅದರಲ್ಲೂ ಕಬ್ಬು ಭತ್ತಗಳಂಥ ಪೈರಿಗೆ ಎಷ್ಟೇ ಮಳೆ ಬರಲಿ **ಕಾಲಕಾಲಕ್ಕೆ** ಸರಿಯಾಗಿ ನೀರು **ಸಮೃದ್ಧಿಯಾಗಿ** ಒದಗಬೇಕು. ಅಂಥ ಅನುಕೂಲವಿರುವ ಕಡೆ ಮಾತ್ರವೇ ಅವು ಬೆಳೆಯುತ್ತವೆ. ಹಿಂಗಾರು ಪೈರಿಗೆ—ಎರಡನೆ ಬೆಳೆಗೆ—ಯಾವಾಗಲೂ ವಿಶೇಷ ನೀರು ಬೇಕು.

ನಮ್ಮ ರೈತರು ಸದಾಕಾಲ ಹೀಗೆಯೇ ಪಂಚಭೂತಗಳ ಅನುಗ್ರಹಾಧೀನರಾಗಿರಬೇಕೇನು? ಈ ಅನಿಶ್ಚಯ ಸಾಮ್ರಾಜ್ಯದ ಕಠೋರತೆಯಿಂದ ಅವರನ್ನು ಬಿಡಿಸಲು ಯಾವ ಉಪಾಯವೂ ಇಲ್ಲವೆ?

ಇದೆ. ಎಷ್ಟೋ ಮಾಡಬಹುದು; ಎಷ್ಟೋ ಮಾಡಿದಾರೆ. ಆದರೂ ಇನ್ನೂ ಎಷ್ಟೋ ಮಾಡಬೇಕಾಗಿದೆ. ಹೊಲಗಳ ಬಳಿ ನದಿ ಹರಿಯುತ್ತಿರುವ ಸ್ಥಳದಲ್ಲಿ ಹೊಳೆನೀರನ್ನು ಹೊಲಗಳಿಗೆ ಸೇದಿಕೊಳ್ಳಬೇಕು. ಇದು ಎಲ್ಲೋ ಕೆಲವು ಹೊಲಗಳಿಗೆ ಮಾತ್ರ ಸಾಧ್ಯ. ಉಳಿದ ಕಡೆ ಕಾಲುವೆ ತೋಡಿ ಹೊಳೆನೀರನ್ನು ಅದಕ್ಕೆ ತಿರುಗಿಸಿ ನೀರಿಲ್ಲದ ಪ್ರದೇಶದಲ್ಲಿ ಅದನ್ನು ಹರಿಯಿಸಬೇಕು. ಹೊಲಕ್ಕೆ ಈ ಬಗೆಯಾಗಿ ನೀರು ಹಾಯಿಸುವುದಕ್ಕೆ ನೀರಾವರಿ ಎನ್ನುತ್ತಾರೆ.

ಹಿಂದಿನ ಕಾಲದಿಂದಲೂ ನಮ್ಮವರು ವಿಸ್ತಾರವಾದ ಕೆರೆಗಳನ್ನು ಕಟ್ಟಿ ನೀರನ್ನು ಸಂಗ್ರಹಮಾಡಿದಾರೆ. ನೆಲದೊಳಗಿನ ನೀರನ್ನು ಸೇದಿಕೊಳ್ಳಲು ಬಾವಿಗಳನ್ನು ತೋಡಿದಾರೆ. ಈ ನೂರು ವರ್ಷಗಳಲ್ಲಿ ದೊಡ್ಡ ದೊಡ್ಡ ನದಿಗಳ ಮೇಲ್ನೀರನ್ನು ಬಳಸಿಕೊಳ್ಳಲು ಹೊಸ ಹೊಸ ಕಾಲುವೆ ತೋಡಿದಾರೆ. ಈಗ ಹಿಂದುಸ್ಥಾನದಲ್ಲಿ **ಐದರಲ್ಲೊಂದು ಪಾಲು** ಸಾಗುವಳಿ ಭೂಮಿ ಒಂದಿಲ್ಲೊಂದು ರೀತಿ ನೀರಾವರಿ (ತರಿ) ಹೊಲವಾಗಿದೆ.

ನೀರಾವರಿ ಪದ್ಧತಿಯಲ್ಲಿ ಬಾವಿಗಳೇ ಎಲ್ಲಕ್ಕಿಂತ ಪುರಾತನೋಪಾಯ. ಪ್ರಯೋಜನದಲ್ಲಿಯೂ ಅವೇ ಶ್ರೇಷ್ಠ. ಹಿಂದುಸ್ಥಾನದ ನೀರಾವರಿ ಭೂಮಿಯಲ್ಲಿ ಕಾಲುಪಾಲು ಬಾವಿಯಾಸರೆಯಲ್ಲಿದೆ. ಒಟ್ಟು 1 ಕೋಟಿ 35 ಲಕ್ಷ ಬಾವಿಗಳಿವೆಯಂತೆ ಹಿಂದುಸ್ಥಾನದಲ್ಲಿ.

ಕೆರೆಗಳೂ ಹಳೆಯ ಕಾಲದವರ ಯುಕ್ತಿಯೇ. ಇವು ಮದರಾಸು ಪ್ರಾಂತದಲ್ಲಿ ಬಹಳ; 40 ಸಾವಿರ ಕೆರೆಯಿವೆ. ಆದರೆ ಸಿಂಧ್ ಪಂಜಾಬುಗಳಲ್ಲಿ



ಕಾಲುವೆಗಳು

2 ಕೋಟಿ 80 ಲಕ್ಷ ಎಕರೆ





ಬಾವಿಗಳು

1 ಕೋಟಿ 20 ಲಕ್ಷ ಎಕರೆ





ಕೆರೆಗಳು

60 ಲಕ್ಷ ಎಕರೆ



ಕೆರೆಯ ಹೆಸರೇ ಇಲ್ಲ. ವರ್ಷಕ್ಕೆ ಮೂರಂಗುಲ ಮಳೆ ಸುರಿದರೆ ಏನು ಕೂಡಿಡಬೇಕು!

ಸದ್ಯ ಕಾಲುವೆಗಳೇ ನೀರಾವರಿಗೆ ಮುಖ್ಯ ಸಾಧನ. ನಮ್ಮ ದೇಶದಲ್ಲೀಗ 70 ಸಾವಿರ ಮೈಲುದ್ದ ಕಾಲುವೆಗಳಿವೆ. 1936-7 ರಲ್ಲಿ ನಮ್ಮ ತರಿಭೂಮಿ 5 ಕೋಟಿ 20 ಲಕ್ಷ ಎಕರೆಯಿತ್ತು. ಅದರಲ್ಲಿ 2 ಕೋಟಿ 80 ಲಕ್ಷ ಎಕರೆ ಕಾಲುವೆಸಾಗು, 60 ಲಕ್ಷ ಎಕರೆ ಕೆರೆಸಾಗು, 1 ಕೋಟಿ 20 ಲಕ್ಷ ಬಾವಿ ಸಾಗು, ಇನ್ನೊಂದು 60 ಲಕ್ಷ ಬೇರೆ ರೀತಿಗಳಿಂದ.

ಮದರಾಸಿನಲ್ಲೂ ಉತ್ತರ ದೇಶದಲ್ಲೂ ಇದ್ದ ಹಾಗೆ ಕಾಲುವೆಗೆ ನೀರು ನದಿಗಳಿಂದ ಬರಬಹುದು. ಅಥವಾ ಕೊಳ್ಳಗಳಿಗೆ ಅಡ್ಡವಾಗಿ ಒಂದು ಅಣೆಕಟ್ಟು ಹಾಕಿ ಅದರಲ್ಲಿ ಮಳೆನೀರು ನಿಲ್ಲುವಂತೆ ಮಾಡಿ ಆ ಕೆರೆ ಒಡ್ಡುಗಳಿಂದ ನೀರು ಹರಿಯಿಸಬಹುದು. ಮುಂಬಯಿ, ಮಹಾಕೋಸಲದಂಥ ಮಳೆ ವಿಶೇಷವಾದ

ಗುಡ್ಡಗಾಡಿನ ಪ್ರಾಂತದಲ್ಲಿ ಮಾತ್ರ ಇಂಥವು ಸಾಧ್ಯ. ನದಿಗಳಿಗೂ ಅಣೆಕಟ್ಟು ಹಾಕಬಹುದು. ಸಿಂಧು ನದಿಗೆ ಸುಕ್ಕೂರು ಕಟ್ಟೆ ಕಟ್ಟಿಲ್ಲವೆ? ಕನ್ನಂಬಾಡಿಯ ಕೃಷ್ಣರಾಜಸಾಗರದ ಕಟ್ಟೆಯನ್ನು ನೀವು ನೋಡಿಲ್ಲವೆ.



ತರಿಯ ಪದ್ಧತಿಯಿಂದ ಬೆಳೆ ಹುಲುಸಾಗುತ್ತದೆ. ಅದರ ವೆಚ್ಚವನ್ನು ಕ್ರಮೇಣ ಕಂದಾಯದ ರೂಪದಲ್ಲಿ ರೈತ ಸರಕಾರಕ್ಕೆ ಕೊಡಬಲ್ಲ. ದಖ್ಖನ್ನಿನಂಥ ಅನಾವೃಷ್ಟಿಯ ಸ್ಥಳಗಳಲ್ಲಿ ಬರಗಾಲ ಬಾರದಂತೆ ತಡೆಯಲಿಕ್ಕಾಗಿಯೇ ಕೆಲವು ಜಲಾಶಯಗಳು ಕಟ್ಟಲ್ಪಟ್ಟಿವೆ. ಇಂಥವಕ್ಕೆ ಆಧಾರ ತರಿಯೆಂದೂ (ಜನರ ಜೀವನಾಧಾರಕ್ಕಾಗಿ ಕಟ್ಟಿದವು) ಉಳಿದವಕ್ಕೆ ಆದಾಯ ತರಿಯೆಂದೂ ಅನ್ನುತ್ತಾರೆ.

ಹಿಂದುಸ್ಥಾನದ ಎಲ್ಲ ಪ್ರಾಂತಗಳಿಗೂ ನೀರಾವರಿಯ ಲಾಭ ಸಮವಾಗಿ ಸಿಕ್ಕಿಲ್ಲ. ಸಿಂಧ್ ಪ್ರಾಂತದಲ್ಲಿ 73.7% ಸಾಗುವಳಿ ಭೂಮಿ ತರಿಯಾದರೆ ಪಂಜಾಬಿನಲ್ಲಿ 44.1% ಮಾತ್ರ. ಬಂಗಾಲದಲ್ಲಿ 6.2%, ಮಹಾಕೋಸಲ ವಿದರ್ಭಗಳಲ್ಲಿ 4.2% ; ಮುಂಬಯಿಯಲ್ಲಿ ತೀರಾ ಕಡಮೆ, 3.9% ಮಾತ್ರವೇ. ಮುಂಬಯಿಗಿಂತ ಸಿಂಧ್‌ಗೆ ನೀರಾವರಿ ಹೆಚ್ಚು ಅಗತ್ಯ. ನಿಜ, ಆದರೆ ಇನ್ನೂ ಎಷ್ಟು ಕೆಲಸವುಳಿದಿದೆ ಗೊತ್ತೆ! ನಮಗೆ ಇನ್ನೂ ಬಾವಿ, ಕೆರೆ ಕಾಲುವೆ ಬೇಕು. ಹೊಳೆ ಕಾಲುವೆಗಳೂ ಬೇಕು. ಕಣಿವೆ ಕೊಳ್ಳಕ್ಕೆ ಅಡ್ಡಕಟ್ಟಿದ ಕೆರೆ ಕಾಲುವೆಗಳೂ ಬೇಕು. ನಮ್ಮ ದೇಶದ ಎಲ್ಲಾ ನೆಲಕ್ಕೂ ಒಂದಿಲ್ಲೊಂದು ರೀತಿ

ನೀರಾವರಿ ಆಸರೆಯಾಗಬೇಕು. ಬಾವಿ ತೋಡಿ ನೀರೆತ್ತಲು 'ಪಂಪು' ಹಾಕ ಬಹುದು. ಅದರ ವೆಚ್ಚ ಹೊರಲು ಹಿಡುವಳಿ ಸಣ್ಣದಾಗಿದ್ದರೆ ನಾಲ್ಕು ಜನ ರೈತರು ಸೇರಿ ಆ ವೆಚ್ಚವನ್ನು ಹೊರಬೇಕು.

ಆಯಿತು. ಹೊಲಕ್ಕೆ ಸರಿಯಾಗಿ ಗೊಬ್ಬರ ಹಾಕಿ ಅನುಕೂಲವಾಗಿ ನೀರು ಹಾಯಿಸಿದ ಮಾತ್ರಕ್ಕೆ ಲಾಭವಾಯಿತೇನು? ಇಲ್ಲ. ಹದವಾಗಿ ಉತ್ತು, ಕುಂಟೆಕೂರಿಗೆ ಹೊಡೆದು, ಚಲೋ ಬೀಜ ಬಿತ್ತಿ, ಪೈರು ಕೊಯ್ಲಿಗೆ ಬಂದಾಗ ಜೋಪಾನವಾಗಿ ಕೊಯ್ದು ಕೂಡಿಟ್ಟುಕೊಳ್ಳದಿದ್ದರೆ ಬರೀ ಗೊಬ್ಬರ ನೀರಿನಿಂದ ಏನು ಲಾಭವಾದೀತು? ಏನೂ ಇಲ್ಲ.

ನೂರು ವರ್ಷಗಳ ಹಿಂದಿನ ತನಕ ಇಡೀ ಪ್ರಪಂಚದಲ್ಲಿ ಬೇಸಾಯವೆಲ್ಲ ಮನುಷ್ಯನ ಕೈಗೆಲಸದಿಂದಲೇ ನಡೆಯುತ್ತಿತ್ತು. ದನ ಅಥವಾ ಕುದುರೆಯ ಸಹಾಯವೇ ಸಹಾಯ.

ಕಾರಖಾನೆಗಳಲ್ಲಿ ಉಗಿ ಯಂತ್ರವನ್ನು ನೋಡಿ ಜನರಿಗೆ ತಾವೂ ಹೊಲ ಗಳಲ್ಲಿ ದನದ ಬದಲು ಅಂಥ ಯಂತ್ರಗಳನ್ನೇಕೆ ಉಪಯೋಗಿಸಬಾರದೆಂಬ ಯೋಚನೆ ಹುಟ್ಟಿತು. ಯಂತ್ರದಿಂದ ಕೆಲಸವೂ ಬೇಗ ಆಗುತ್ತದೆ; ದನಕ್ಕೆ



ಹಾಕಿದಷ್ಟು ಮೇವೂ ಇದಕ್ಕೆ ಬೇಕಿಲ್ಲ. ಬಿತ್ತಲು ಉಳಲು, ತುಳಿಸಲು ತೂರಲು, ಗಾಣವಾಡಲು, ನೀರೆತ್ತಲು, ಪೈರು ಕೊಯ್ಯಲು ಎಲ್ಲ ಕೆಲಸಗಳಿಗೂ ಯೂರೋಪು ದೇಶಗಳಲ್ಲಿ ಬಗೆಬಗೆಯ ಯಂತ್ರಗಳು ಮೊದಲಾದವು.

ತರುವಾಯ ಹಬೆಗೆ ಬದಲು ಈ ಯಂತ್ರಗಳನ್ನು ನಡೆಸಲು ಎಣ್ಣೆ ಬಂತು. ಈಗ ವಿದ್ಯುಚ್ಛಕ್ತಿ ಬಳಸಲ್ಪಡುತ್ತಿದೆ. ಒಂದಾಳು ಒಂದು ಕುದುರೆ, ದಿನವೊಂದಕ್ಕೆ ಒಂದೆಕರೆ ಉತ್ತರೆ ಮೋಟರ್ ನೇಗಿಲು ಐದೆಕರೆ ಉಳುತ್ತದೆ. ಅಮೆರಿಕಾದಲ್ಲೀಗ ಆಕಳು ಕರೆಯುವುದು ಗೌಳಿಗಿತ್ತಿಯಲ್ಲ; ವಿದ್ಯುತ್‌ಯಂತ್ರ. ಕೆನೆ ಮಾಡುವುದು ಬೆಣ್ಣೆ ತೆಗೆಯುವುದು ಎಲ್ಲಾ ಯಂತ್ರಗಳೇ. 'ಸರಕೈಯ ಸಂಪರ್ಕವೇ' ಇಲ್ಲ. ಅದರಿಂದ ಶುಚಿ ಹೆಚ್ಚು, ಆರೋಗ್ಯವೂ ಹೆಚ್ಚು. ನೆಲದ ಹೊಟ್ಟೆಯೊಳಗೆ ಒಂದು ಕೊಳವೆಯಿಟ್ಟು ಅದರಲ್ಲಿ ವಿದ್ಯುತ್ತನ್ನು ಹರಿಯಿಸಿ ನೆಲಕ್ಕೆ ಶಾಖಕೊಟ್ಟರೆ ಪೈರು ಇನ್ನೂ ಬೇಗ ಬೆಳೆದೀತೇನೋ ಎಂದು ಸ್ವೀಡನ್ ದೇಶದಲ್ಲಿ ಪ್ರಯೋಗಮಾಡಿ ನೋಡುತ್ತಿದಾರೆ.

ನಮ್ಮ ಭೂಮಿಯಲ್ಲೂ ಹೆಚ್ಚು ಹೆಚ್ಚು ಬೆಳೆ ತೆಗೆಯಬೇಕೆಂದು ಯಂತ್ರ ಮೊದಲಾದ ವೈಜ್ಞಾನಿಕ ಸಲಕರಣೆಗಳನ್ನು ಬಳಸುತ್ತಿದೇವೆಯೋ? ಇಲ್ಲವಲ್ಲ! ಒಬ್ಬರಿಬ್ಬರಿಗೆ. ಕಬ್ಬಿಣದ ನೇಗಿಲಿದ್ದರೂ ನಮ್ಮ ರೈತರಿನ್ನೂ ಹಳೆಯ ಮರದ ನೇಗಿಲನ್ನೇ ಉಪಯೋಗಿಸುತ್ತಾರೆ. ಸಾವಿರ ವರ್ಷದ ಹಿಂದೆ ಓಜೀರಾಯನ ಕಾಲದಲ್ಲಿದ್ದ ಆಯುಧಗಳೇ, ಅದೇ ರೂಢಿಯೇ. ಇದಕ್ಕೆ ಅನೇಕ ಕಾರಣಗಳಿವೆ. ನಮ್ಮ ಜನ ತೀರಾ ಬಡವರು; ಯಂತ್ರವೆಂದರೆ ಹಣಬೇಕು. ಸ್ವಂತ ಹೊಲವಿಲ್ಲದ 10 ಕೋಟಿ ದಿನಗೂಲಿ ಜನ ಇರುವಾಗ ನಮಗೆ ಕೂಲಿ ಅಗ್ಗವಾಗಿರಬೇಕಲ್ಲವೆ. ಇಷ್ಟು ಅಗ್ಗವಾದ ಕೂಲಿಯಾಳು ಸಿಗುವಾಗ ಯಂತ್ರವನ್ನು ಯಾರು ಕೊಳ್ಳು ತ್ತಾರೆ? ನಮ್ಮ ಹಳ್ಳಿಗಳಲ್ಲಿ ಜನವಸತಿ ಬಹಳ ಹೆಚ್ಚಾಗಿದೆ. ಈ ಹೆಚ್ಚಿನ ಜನದಿಂದ ನಮ್ಮಲ್ಲಿ ಯಂತ್ರ ಬಳಕೆಗೆ ಬರುವುದು ನಿಧಾನವಾಗುತ್ತದೆ. ಮತ್ತೊಂದು ಕಾರಣ ಅಜ್ಞಾನ. ಉಳಿದ ಜಗತ್ತೆಲ್ಲ ವಿಜ್ಞಾನವನ್ನು ಬೇಸಾಯಕ್ಕೆ ಬಳಸಿ ಕೊಳ್ಳುತ್ತಿರುವಾಗ ನಮ್ಮ ರೈತನಿಗೆ ಮೋಟರ್ ನೇಗಿಲು ಎಂದರೇನೋ ಗೊತ್ತೇ ಇಲ್ಲ! ತಾವು ಬಿತ್ತುವ ಬೀಜ ಚಲೋದೋ ಅಲ್ಲವೋ ನೋಡರು; ಹಳೇ ಕಾಲದ ಮುಟ್ಟುಬಿಡರು; ಕಾಳುಕಡ್ಡಿ ಹಗೇವು ಕಣಜಗಳಿಗೆ ಹಾಕಿ ನಷ್ಟ ಮಾಡಿಕೊಳ್ಳುವುದು ಬೇರೆ.

ನಮ್ಮ ಹಳ್ಳಿ ಜನಕ್ಕೆ ಇದನ್ನೆಲ್ಲ ಕಲಿಸಬೇಕು. ಅವರಿಗೆ ಬರೀ ಓದು

ಬರಹ ಕಲಿಸಿದರೆ ಸಾಲದು. ತಮ್ಮ ಕೆಲಸವನ್ನು ಹೇಗೆ ಮಾಡಬೇಕೆಂಬುದನ್ನೂ ತಿಳಿಸಬೇಕು. ನಾಡಿನೊಳಗೆ ಹೋಗಿ ರೈತರಿಗೆ ಬುದ್ಧಿ ಹೇಳಲು ಸರಕಾರಿ ವ್ಯವಸಾಯ ಶಾಖೆಗಳ ಅಧಿಕಾರಿಗಳು ಇದಾರೆ. ಆದರೆ ಎಷ್ಟು ಜನ? ಪಂಜಾಬಿನಲ್ಲಿ ಒಬ್ಬೊಬ್ಬ ಅಧಿಕಾರಿ 9 ಸಾವಿರ ಜನ ರೈತರ ಯೋಗಕ್ಷೇಮವನ್ನು ವಿಚಾರಿಸಬೇಕು; ಯಾವಾಗಲೂ ಹಳ್ಳಿಹಳ್ಳಿ ತಿರುಗುತ್ತಿದ್ದರೂ ಸಹ ಒಂದು ಸಲ ಹೋದ ಹಳ್ಳಿಗೆ ಮತ್ತೆ ಹೋಗಲು ಈ ಅಧಿಕಾರಿಗೆ ನಾಲ್ಕಾರು ವರ್ಷವಾದರೂ ಬೇಕು. ಸದ್ಯ ಬೇಕಾದುದು ನಿಕಟಪರಿಚಯ, ಹೆಚ್ಚು ಹೆಚ್ಚು ಸಂಬಂಧ. ಯಂತ್ರಗಳನ್ನು ಹೇಗೆ ಬಳಸಬೇಕೆಂಬದನ್ನು ತಿಳಿಸಲು ಹಳ್ಳಿಗಳಿಗೆ ತಜ್ಞರನ್ನು ಕಳಿಸಬೇಕು. ದೊಡ್ಡ ದೊಡ್ಡ ಕಾರಖಾನೆಗಳನ್ನು ಕಟ್ಟಿ ಯಥೇಷ್ಟವಾಗಿ ಯಂತ್ರಗಳನ್ನು ತಯಾರುಮಾಡಿ ಸಾಧ್ಯವಿದ್ದಷ್ಟು ಅಗ್ಗವಾಗಿ ಮಾರಬೇಕು. ಅವನ್ನು ಕಡಮೆ ಬಾಡಿಗೆಗೆ ಹಳ್ಳಿಗಳಿಗೊಯ್ಯಬೇಕು ನಮ್ಮ ರೈಲು.

ನಮ್ಮ ರೈತರಿಗೆ ಇನ್ನೂ ಒಂದು ಕಲಿಸಬೇಕು. ಉತ್ತಮವಾದ ಆರಿಸಿದ ಬೀಜಗಳನ್ನು ಉಪಯೋಗಿಸುವ ಹಾಗೆ ಹೇಳಿಕೊಡಬೇಕು. ಅಮೆರಿಕಾದವರು ಬೀಜಗಳನ್ನು ಶಾಸ್ತ್ರಪ್ರಕಾರವಾಗಿ ಬಿತ್ತಿ ಬೆಳೆಸಿ, ತಮ್ಮ ಭತ್ತದ ಬೆಳೆಯನ್ನು ಎಕರೆಗೆ 1000 ಪೌಂಡಿನಿಂದ 2000 ಪೌಂಡಿಗೆ ಹೆಚ್ಚಿಸಿಕೊಂಡಿದಾರೆ. ಅಫಘಾನಿಸ್ತಾನದಲ್ಲಿಯೂ ಈ ವರ್ಷ ಅವರ ಯುಗಾದಿಯ ಹಬ್ಬದಲ್ಲಿ ಏನು ಮಾಡಿದರು ಗೊತ್ತೆ? ಸರಕಾರದವರು ಒದಗಿಸಿಕೊಟ್ಟ ಉತ್ತಮತರದ ಬೀಜಗಳನ್ನು ಬಿತ್ತಿ ಹಬ್ಬಮಾಡಿದರು ಅಲ್ಲಿನ ರೈತರು.

ಒಕ್ಕಲಿಗನಿಗೆ ಹೊಲ ಮಾಡಲು ಬೇಕಾಗುವ ಸಲಕರಣೆಗಳಲ್ಲಿ ದನವೂ ಒಂದು. ಸಾಧಾರಣವಾಗಿ ಒಂದು ಹೊಲಕ್ಕೆ ಒಂದಾಕಳು ಎರಡೆತ್ತು ಇರುತ್ತವೆ. ಎಲ್ಲ ಕಡೆಯಲ್ಲೂ ಹೀಗಿಲ್ಲ. ಒರಿಸ್ಸಾ ನಮ್ಮ ದೇಶದಲ್ಲಿ ಬಹಳ ಬಡಪ್ರಾಂತ. ಕೆಲವು ವರ್ಷಗಳ ಹಿಂದೆ ಮಹಾತ್ಮಾ ಗಾಂಧಿ ಈ ಪ್ರಾಂತದಲ್ಲಿ ಕಾಲು ನಡಿಗೆಯಿಂದ ಪ್ರವಾಸ ಮಾಡಿದರು. ಹತ್ತು ದಿನ ಅವರ ಜೊತೆಯಲ್ಲಿ ಪ್ರವಾಸ ಮಾಡುವ ಭಾಗ್ಯ ನನಗೆ ಲಭಿಸಿತ್ತು. ಆ ಹತ್ತು ದಿನಗಳಲ್ಲಿ ನಾವು ನೋಡಿದ ಎಷ್ಟೋ ಹಳ್ಳಿಗಳಲ್ಲಿ ಒಂದಾದರೂ ಆಕಳಿರಲಿಲ್ಲ, ಹಾಲೂ ಇರಲಿಲ್ಲ. ಆ ಹಳ್ಳಿ

ಗಳಲ್ಲಿದ್ದ ಮಕ್ಕಳನ್ನು ಕಂಡು ನನಗೆ ಬಹಳ ಕನಿಕರವೆನಿಸಿತು. ಅವರೆಲ್ಲ ತುಂಬ ಕುಳ್ಳಾಗಿದ್ದರು.

ಹೊಲದ ತರುವಾಯ ದನವೇ ರೈತನ ಬೆಲೆಬಾಳುವ ಆಸ್ತಿ. ಅವನಿಗೆ ದನ ಎಷ್ಟೋ ಬಗೆಯಲ್ಲಿ ನೆರವಾಗುತ್ತವೆ. ಅವನ ಹೊಲವನ್ನು ಆ ಮೂಲೆಯಿಂದ ಈ ಮೂಲೆಗೆ ಉಳುತ್ತವೆ. ಪೇಟೆಗೆ ಅವನ ಬಂಡಿಯನ್ನೆಳೆದುಕೊಂಡು ಹೋಗಿ ದಿನಸು ತರುತ್ತವೆ. ಆಕಳು ಕರು ಹಾಕಿದರೆ ಅದರಿಂದ ನಾಲ್ಕು ಹಣ ಸಿಗುತ್ತದೆ. ಅವನ ಮಕ್ಕಳಿಗೆ ಅತ್ಯಗತ್ಯವಾದ ಹಾಲನ್ನು ಕೊಡುತ್ತದೆ. ಯಾರೋ ಹೇಳಿದ ಹಾಗೆ 'ಮಾಂಸ ತಿನ್ನದ ಸಸ್ಯಾಹಾರಿಗಳ ದೇಶದಲ್ಲಿ ಹಾಲು ಬೆಣ್ಣೆ ತುಪ್ಪ ಇಲ್ಲದಿರುವುದಕ್ಕಿಂತ ದೌರ್ಭಾಗ್ಯವಿನ್ನೇನು'? ಈ ಪ್ರಾಣಿಗಳ ಸರ್ವಾಂಗವೂ ಉಪಯೋಗಕರ. ಅದರ ಚರ್ಮ, ಹಲ್ಲು, ಎಲುಬು, ಕೊಂಬು, ಗೊರಸು ಎಲ್ಲಾ ಬೇರೆ ಬೇರೆ ಪದಾರ್ಥಗಳನ್ನು ಮಾಡಲು ಬರುತ್ತವೆ. ಸಗಣಿಯನ್ನಂತೂ ಮರೆಯುವ ಹಾಗೇ ಇಲ್ಲ. ಅದಕ್ಕಾಗಿಯೇ ರೈತನಿಗೆ ತನ್ನ ದನವನ್ನು ಕಳೆದುಕೊಳ್ಳಬಾರದೆಂದು ಅಷ್ಟು ಶ್ರದ್ಧೆ. ತಾನು ತನ್ನ ಸಂಸಾರ ಎಲ್ಲರೂ ದನದ ಜೊತೆಗೆ ಒಂದೇ ಅಂಕಣದಲ್ಲಿ ಮಲಗಿದರೂ ಪರವಾಯಿಲ್ಲ.



ನಮ್ಮ ದನವನ್ನು ನಾವು ಚೆನ್ನಾಗಿ ಕಾಪಾಡುತ್ತೇವೆ. ಆದರೆ ಸರಿಯಾಗಿ ಮೇಯಿಸುವ ಗೋಜಿಲ್ಲ. ನಮ್ಮ ದನವೆಲ್ಲ ನಿಜವಾಗಿಯೂ ಮೇವಿಲ್ಲದೆ ಸೊರಗಿ ಹೋಗಿವೆ. ಅವಕ್ಕಾಗಿ ಮೇವು ಬೆಳೆಸಲು ನಮಗೆ ಸಾಕಷ್ಟು ಬೀಳುನೆಲವಿಲ್ಲ. ಮುಂಗಾರು ಹಸಿಯೊಡೆದಾಗ ಹುಲ್ಲು ಹುಚ್ಚಗೆ ಚಿಗುರುತ್ತದೆ. ಆ ಹಸಿಹುಲ್ಲಿನ ದಿನದಲ್ಲೇ ನಾಲ್ಕು ಹೊತ್ತು ಹೊಟ್ಟೆ ತುಂಬ ಮೇಯುತ್ತವೆ ದನ; ಅಜೀರ್ಣವಾಗುವ ಹಾಗೆ ತಿನ್ನುತ್ತವೆ. ಆದರೆ ಡಿಸೆಂಬರ್ ಹೊತ್ತಿಗೆ ಹುಲ್ಲೆಲ್ಲ ಮೊಟಕಾಗಿ

ಬಿಡುತ್ತದೆ. ಅಲ್ಲಿಂದ ಜೂನ್ ತಿಂಗಳ ವರೆಗೆ ಆರು ತಿಂಗಳು ಮೇವೇ ಇಲ್ಲದೆ ದನ ಪಡುವ ಪಾಡು ಹೇಳತೀರದು. ಬರೀ ಕಲ್ಲುನೆಲದಲ್ಲಿ ಬೋಳು ಹೊಲದಲ್ಲಿ ಅಲೆಯುತ್ತ ಕಳೆಗುಂದಿ ಬರೀ ಎಲುಬಿನ ಗೂಡಾಗಿ ಹೋಗುತ್ತವೆ. ಬರ ಬಂದರಂತೂ ದನದ ಗತಿ ಅತಿದಾರುಣ. ಈ ದಿನ ಬೆಳಗ್ಗೆ ಪತ್ರಿಕೆಯಲ್ಲಿ ಹೀಗಿತ್ತು ಸುದ್ದಿ.

‘ತಾರಪಾರಕರ ಜಿಲ್ಲೆಯಲ್ಲಿ ಒಟ್ಟು 6,81,000 ದನದಲ್ಲಿ 2,69,000 ಸತ್ತವು, 1,17,000 ದೇಶಾಂತರವಾದವು, 10,000 ದನ ಮೂರರಿಂದ ಹತ್ತು ರೂಪಾಯಿಯೊಳಗೆ ಸಿಕ್ಕ ಬೆಲೆಗೆ ಮಾರಿಹೋದವು. ಉಳಿದ 2,85,000 ದನ ಮೇವಿಲ್ಲದೆ ಸಾಯಲಾಗಿವೆ’ ಎಂದು ಕರಾಚಿಯ ಮಾರ್ಕೆಟಿಂಗ್ ಅಧಿಕಾರಿ ವರದಿಮಾಡಿದಾರೆ.

ಜನಕ್ಕೆ ಕಾಳುಕಡಿ ಬೆಳೆಯಲು ಕೊಂಚವಾದರೂ ಕಾಳಜಿ ಮಾಡುತ್ತೇವೆ. ದನಕ್ಕೆ ಮೇವು ಬೆಳೆಸಲು ಅಷ್ಟು ಇಲ್ಲ. ಇಲ್ಲದಿದ್ದರೆ ಈಗ ಬೆಳೆವ ಮೇವಿಗೆ ಮುಪ್ಪಟ್ಟು ಬೆಳೆಯಲಾಗುತ್ತಿರಲಿಲ್ಲವೆ? ಹಾಗೆ ಮಾಡಿದರೆ **ನಮಗೆಷ್ಟು ದನ ಬೇಕೋ** ಅಷ್ಟು ದನಕ್ಕೆ ಮೇವು ಬೆಳೆಯುತ್ತದೆ. ನಮ್ಮಲ್ಲಿ **ಇರುವ ಎಲ್ಲ** ದನಕ್ಕೂ **ಸಾಲುವಷ್ಟಾಗಲಿಕ್ಕಿಲ್ಲ.**

ಇಡೀ ಜಗತ್ತಿನಲ್ಲಿ 54 ಕೋಟಿ ದನ ಇವೆ. ಅದರಲ್ಲಿ ನಮ್ಮವು 18 ಕೋಟಿ. ಅಂದರೆ ಜಗತ್ತಿನ ಮೂರರಲ್ಲೊಂದು ಪಾಲು. ಇದು ಬಹಳ ಹೆಚ್ಚು. ಈಜಿಪ್ಟಿನಲ್ಲಿ 100 ಎಕರೆ ಸಾಗುಭೂಮಿಗೆ 25 ದನ ಸಾಕುತ್ತಾರೆ. ಡಚ್ ಜನ ಬೆಣ್ಣೆ ಕೆನೆ ಮಾಡುವ ಜನ. ಆದರೂ ಅವರಿಗೆ 100 ಎಕರೆಗೆ 38 ದನ. ನಮಗೋ 67! ನಮ್ಮ ಹಾಗೆಯೇ ನಮ್ಮ ದೇಶದಲ್ಲಿ ದನಗಳೂ ಹೆಚ್ಚು! ಇಷ್ಟು ದನಕ್ಕೆ ಮೇವು ಒದಗುವುದಿಲ್ಲವೆಂದರೆ ಏನಾಶ್ಚರ್ಯ?

ಆದರೆ ಹೀಗೇಕೆ? ನಾವು **ಅತಿ ದಯಾವಂತರಾದುದರಿಂದ** ಹೀಗೆ. ಇತರ ದೇಶಗಳಲ್ಲಿ ಕೆಲಸಕ್ಕೆ ಬಾರದ ದನವನ್ನು ಕೊಂದು ಮಾಂಸವನ್ನು ತಿನ್ನುತ್ತಾರೆ. ಹಿಂದುಸ್ಥಾನದಲ್ಲಿ ಹಿಂದೂಜನ ದನದ ಮಾಂಸ ತಿನ್ನರು. ಎಂಥ ನಿಷ್ಪ್ರಯೋಜಕ ಪ್ರಾಣಿಯೇ ಆಗಲಿ ಸಾಧ್ಯವಿದ್ದ ಮಟ್ಟಿಗೂ ಎಷ್ಟೋ ಜನ ಅದನ್ನು ಕೊಲ್ಲರು. ಆದರೆ ಆ ದನವನ್ನು ಉಪವಾಸ ಬಣಗಿಸಿದರೂ ನಮಗೇನೂ

# 681 ದನಗಳಲ್ಲಿ












ಅನಿಸದು. ಹಾಗಲ್ಲ; ನಮ್ಮ ಸೂತ್ರ ಹೀಗಿದೆ—'ಕೊಲ್ಲಲೂ ಬೇಡ, ಬದುಕಲಿ ಎಂದು ಬಹಳಷ್ಟು ಹೆಣಗಲೂ ಬೇಡ.'

ಕಡಮೆ ದನವನ್ನು ಸಾಕಿ ಅವಕ್ಕೆ ಹೊಟ್ಟೆಗೆ ಸರಿಯಾಗಿ ಮೇವುಕೊಟ್ಟು ಸಲಹುವುದು ಇದಕ್ಕಿಂತ ಹೆಚ್ಚು ದಯೆಯಲ್ಲವೆ! ನೀವೇನನ್ನುತ್ತೀರಿ? ಅದರಿಂದ ಲಾಭವೂ ಹೆಚ್ಚಲ್ಲವೆ? ಅವು ಹೆಚ್ಚು ಹೆಚ್ಚು ದುಡಿದು ಹೆಚ್ಚು ಹೆಚ್ಚು ಹಾಲು ಕೊಟ್ಟಾವು. ಈಗಂತೂ ನೂರಕ್ಕೆ 70 ಆಕಳು ಹಾಲೇ ಕೊಡವು. ಕೊಟ್ಟವು ಕೂಡ ದಿನಕ್ಕೆ 5 ಪೌಂಡು ಹಾಲು ಕರೆವಲ್ಲಿ 1½ ಪೌಂಡು ಕರೆಯುತ್ತವೆ.

ಮುಂದಿನ ಪುಟದ ಚಿತ್ರ ನೋಡಿ. ಒಂದೊಂದು ಆಕಳು ಒಂದೊಂದು ಕೋಟಿ ಹಾಲು ಹಿಂಡುವವರ ಸಂಖ್ಯೆ ಆಯಾ ದೇಶದಲ್ಲಿ ಸಿಗುವ ಹಾಲಿಗೆ ತಕ್ಕಂತೆ. ನಾವು ಕಟ್ಟಿಕೊಂಡಿರುವ 18 ಕೋಟಿ ಹಸು ಎಮ್ಮೆ ಕರೆಯುವ ಹಾಲನ್ನು ಜರ್ಮನಿಯಲ್ಲಿ 2½ ಕೋಟಿಯೇ ಕರೆಯುತ್ತವೆ ನೋಡಿ.

ಇಷ್ಟು ಹೊತ್ತೂ ನಾವು ಹೊಲಕ್ಕೆ ಗೊಬ್ಬರ, ನೀರು, ಬೇಸಾಯಕ್ಕೆ ಒಳ್ಳೆ ಬೀಜ ಮುಟ್ಟು ಮತ್ತೊಂದು, ಉಳಲಿಕ್ಕೆ ಚಲೋ ಗಟ್ಟಿ ದನ ಇವುಗಳ ವಿಷಯವನ್ನೇ ಯೋಚಿಸುತ್ತಿದೇವೆ. ಆದರೆ ಸಾಗುಮಾಡಲು ಸಾಕಷ್ಟು ಹೊಲವಿದ್ದರಲ್ಲವೆ ಇವೆಲ್ಲ? ಅಲ್ಲವೆ? ಊಹುಂ ನಮಗೆ ಅದೂ ಇಲ್ಲ. 'ಏನೇನು' ಎಂದು ಅಚ್ಚರಿಯಿಂದ ಕೂಗುತ್ತೀರಾ? ಹಿಂದುಸ್ಥಾನದಂಥ ದೊಡ್ಡ ದೇಶದಲ್ಲಿ ಉಳಲು ನೆಲವಿಲ್ಲವೆ ಎನ್ನುತ್ತೀರಾ? ನನಗೇನೋ ಹುಚ್ಚು ಹಿಡಿದಿರಬೇಕನಿಸುತ್ತದೆಯಲ್ಲವೆ. ಬೆದರಬೇಡಿ! ನಾನು ಹೇಳಿದುದು ನಿಜವೆಂದು ನಿಮಗೆ ತೋರಿಸಿಕೊಡುತ್ತೇನೆ.





ಸಂ. ರಾಷ್ಟ್ರ







ರಷ್ಯಾ







ಬ್ರೆಜಿಲ್





ಜರ್ಮನಿ





ಸಂ. ರಾಜ್ಯ





ದನ




ಹಾಲು




ಹಿಂದುಸ್ಥಾನ



# VII

# ಸಾಕಷ್ಟು ಹೊಲವಿಲ್ಲ!

ಸಣ್ಣದೊಂದು ಚೂರು ಕಾಗದವನ್ನು ನಿನ್ನ ಕೈಗೆ ಕೊಟ್ಟು ದೊಡ್ಡದೊಂದು ವಿಷಯವನ್ನು ಕುರಿತು ಒಂದು ಪ್ರಬಂಧವನ್ನು ಬರೆಯೆಂದರೆ ಬರೆಯಲು ಸಾಧ್ಯವೇ ನಿನಗೆ? ಅಥವಾ ಒಂದು ಗಜ ಉಣ್ಣೆ ಕೊಟ್ಟು ಅದರಲ್ಲೊಂದು ಬನೀನು ಮಾಡೆಂದರೆ ನಿನಗೆ ಸಾಧ್ಯವೇನಮ್ಮಾ ತಂಗಿ? ನೀನು ಆ ಪ್ರಯತ್ನವನ್ನೇ ಮಾಡಲಿಕ್ಕಿಲ್ಲವಲ್ಲವೆ! ಆದರೆ ನಮ್ಮ ರೈತರಲ್ಲನೇಕರಿಗೆ ಎಂಟಾಣೆ ಭಾಗ ಹೊಲವಿದ್ದರೂ ಅವರ ಸಂಸಾರಕ್ಕೆ ಬೇಕಾಗುವ ರೂಪಾಯಿಯಷ್ಟು ಗೋಧಿಯನ್ನೋ ಕಬ್ಬನ್ನೋ ಹತ್ತಿಯನ್ನೋ ಬೆಳೆಯಬೇಕಂತೆ.

ನಮ್ಮ ಗೆಳೆಯ ರಾಮನಿಗೆಷ್ಟು ಹೊಲವಿದೆಯೋ ನೋಡೋಣ. ಹಿಂದುಸ್ಥಾನದಲ್ಲಿ ಅನೇಕ ರೈತರಿಗಿದ್ದಂತೆ ಅವನಿಗೂ ನಾಲ್ಕು ಎಕರೆ ಹೊಲವಿದೆ. ಈ ನಾಲ್ಕು ಎಕರೆಯೂ ಒತ್ತಟ್ಟಿಗೆ ಒಂದೇ ತಾಕಾಗಿಲ್ಲ. ಇಲ್ಲೊಂದು ಪಟ್ಟಿ ಅಲ್ಲೊಂದು ಪಟ್ಟಿ, ನಡುವೆ ಯಾರವ್ರೋ ಹೊಲ. ಅವನ ಹೊಲದಲ್ಲಿ ವರ್ಷಕ್ಕೆ 200 ರೂಪಾಯಿನ ಬೆಳೆ ಬೆಳೆಯುತ್ತದೆ ಎನ್ನೋಣ. ಇದರಲ್ಲಿ 30 ರೂ. ಸರಕಾರಕ್ಕೆ ತೆರಿಗೆಯಾಗಿ ಕೊಡಬೇಕು. ಹಳ್ಳಿಯ ಸಾವಕಾರನಲ್ಲಿ ತಂದಿದ್ದ ಸಾಲಕ್ಕೆ 50 ರೂ. ಬಡ್ಡಿ ಕೊಡಬೇಕು. ಉಳಿದ 120 ರೂಪಾಯಿನಲ್ಲಿ ಅವನಿಗೆ, ಅವನ ಕುಟುಂಬಕ್ಕೆ, ಮೂವರು ಮಕ್ಕಳಿಗೆ, ಆಕಳು ಎರಡೆತ್ತು ಹೊಲ ಎಲ್ಲಕ್ಕೂ ಆಗಬೇಕು. ಅಂದರೆ ತಿಂಗಳಿಗೆ ಹತ್ತು ರೂಪಾಯಿ! ಎಲ್ಲರೂ ಅರೆ ಹೊಟ್ಟೆ

ವರಮಾನ
ರೂ. 200
ವರುಷಕ್ಕೆ

ಸಂಸಾರ, ದನ, ಹೊಲಕ್ಕೆ ರೂ. 120



ರೂ. 50 ಬಡ್ಡಿಗೆ



ರೂ. 30 ತೆರಿಗೆಗೆ



ಯುಂಟು, ಹರಕು ಅರಿವೆಯುಟ್ಟು, ಅವನಿಗೆ ಚಳಿಜ್ವರ ಅವನ ಮಕ್ಕಳಿಗೆ ಕ್ಷಯ ಬಂದರೆ ಏನಾಶ್ಚರ್ಯ? ಅವನ ದನ ಸೊರಗಿ ಪಕ್ಕೆಯೊಳಗಿನ ಮೂಳೆಯೆಲ್ಲ ಕಾಣಿಸಿಕೊಂಡರೆ, ಅವನ ಹಸು 5 ಪೌಂಡು ಹಾಲುಕೊಡುವ ಬದಲು $1\frac{1}{2}$ ಪೌಂಡು ಮಾತ್ರವೇ ಕೊಟ್ಟರೆ ಏನಾಶ್ಚರ್ಯ? ಒಂದೇ ಗುಡಿಸಲಲ್ಲಿ ಒಂದು ಮೂಲೆಗೆ ರಾಮನ ಸಂಸಾರ ಒಂದು ಮೂಲೆಗೆ ಅವನ ದನ ಬದುಕುತ್ತಿದ್ದರೆ ಏನಾಶ್ಚರ್ಯ?

ಬೇರೆ ದೇಶಗಳಲ್ಲಿ ರೈತರು ಎಷ್ಟೆಷ್ಟು ಹೊಲ ಸಾಗುವಳಿ ಮಾಡುತ್ತಾರೆ ಗೊತ್ತೇ? ಬ್ರಿಟಿಷ್ ರೈತ 26 ಎಕರೆ ಸಾಗಿದರೆ ಕೆನಡಾ ರೈತ 140 ಎಕರೆ ನೋಡಿಕೊಳ್ಳುತ್ತಾನೆ. ನಮ್ಮ ರಾಮನಿಗೂ ಉಳಿದ ರೈತರಿಗೂ ಮೂರೋ ನಾಲ್ಕೋ ಅಥವಾ ಐದೋ ಎಕರೆ ಮಾತ್ರ ಹೇಗಾಯಿತು?

ಹುಟ್ಟುವಳಿ-ಬೇಡಿಕೆಯ ಸೂತ್ರವೇ ಅದಕ್ಕೆ ಉತ್ತರ. ಹೊಲ ಸ್ವಲ್ಪ, ಊಟಮಾಡುವ ಬಾಯಿ ಬಹಳ. ಹಿಂದುಸ್ಥಾನದ ಜನಸಂಖ್ಯೆಯೇನೋ ವರ್ಷ ವರ್ಷವೂ ಬೆಳೆಯುತ್ತಲೇ ಇದೆ. ದೇಶದ ವೈಶಾಲ್ಯ ಮಾತ್ರ ಹಿಗ್ಗಿಲ್ಲ. ಎಲ್ಲಾ ದೇಶಗಳಲ್ಲೂ ಹೀಗೇ ಆಗಿದ್ದರೂ ಅಲ್ಲಿ ದೊಡ್ಡದೊಡ್ಡ ಕಾರಖಾನೆ ಹುಟ್ಟಿಕೊಂಡಿವೆ. ಹಳ್ಳಿಜನ ಪಟ್ಟಣಗಳಿಗೆ ಹೋಗಿ ಅಲ್ಲಿ ಕೆಲಸಮಾಡಿ ಬದುಕುತ್ತಿದಾರೆ. ಜರ್ಮನಿಯಲ್ಲಿ 1870 ರಿಂದ 1914 ರೊಳಗೆ ಎರಡೂವರೆ ಕೋಟಿ ಜನ ಹಳ್ಳಿಗರು ಕಾರಖಾನೆಗಳಲ್ಲಿ ಸೇರಿಕೊಂಡರು. ನಮ್ಮ ದೇಶದಲ್ಲಿ ಲೆಕ್ಕಹಾಕಿದ ಹಾಗೆ ಮುಕ್ಕಾಲುಪಾಲು ಜನಕ್ಕೆ ಈಗಲೂ ಬೇಸಾಯವೇ ಹೊಟ್ಟೆಗೆ ಆಧಾರ. ಇದರಿಂದ ಅರ್ಧಕ್ಕರ್ಧ ರೈತರಿಗೆ ಸಾಗು ಮಾಡೋಣವೆಂದರೆ ಸಾಕಷ್ಟು ಹೊಲವಿಲ್ಲ.

ರಾಮನ ಅಜ್ಜನಿಗೆ ರಾಮನಿಗಿಂತ ಹೆಚ್ಚು ಭೂಮಿಯಿತ್ತು. ಆದರೆ ಅವನ ನಾಲ್ಕುಜನ ಮಕ್ಕಳು ತಂದೆ ಸತ್ತಾಗ ತಮ್ಮ ಹೊಲವನ್ನು ಹಂಚಿಕೊಂಡರು. ಹಿಂದೂ ಜನರಲ್ಲಿ ತಂದೆ ಸತ್ತರೆ ಮಕ್ಕಳು ಆ ಯಾಸ್ತಿಯನ್ನು ಸಮವಾಗಿ ಹಂಚಿಕೊಳ್ಳಬಹುದೆಂದು ನ್ಯಾಯವೇ ಹೇಳುತ್ತದೆ. ತರುವಾಯ ರಾಮನ ತಂದೆಯೂ ಸತ್ತ. ರಾಮನೂ ಅವನ ಅಣ್ಣತಮ್ಮಂದಿರೂ ಇದ್ದುದನ್ನೇ ಮತ್ತೆ ಹಂಚಿಕೊಂಡರು. ಹಂಚಿಕೊಂಡರೆ ಒಬ್ಬೊಬ್ಬನಿಗೆ ನಾಲ್ಕು ನಾಲ್ಕು ಎಕರೆ.

ಈ ನಾಲ್ಕು ಎಕರೆಯೂ ಒಂದೇ ಹಿಡುವಳಿಯಾಗಿಲ್ಲ. ಹಂಚಿಕೊಂಡಾಗೆಲ್ಲ ತಮ್ಮ ಭೂಮಿಯಲ್ಲಿ ಪ್ರತಿಯೊಂದು ತರದ್ದೂ ತಮಗೆ ಸ್ವಲ್ಪ ಸ್ವಲ್ಪವಿರಲೆಂದು ಅಲ್ಲಿಷ್ಟು ಇಲ್ಲಿಷ್ಟು ಹಂಚಿಕೊಂಡರು. ಬೇರೆ ಯಾವ ರೀತಿ ಹಂಚಿದರೂ ಸರಿ ಹೋಗುತ್ತಿರಲಿಲ್ಲ! ಪ್ರತಿಯೊಬ್ಬನಿಗೂ ಒಂದು ಪಟ್ಟಿ ಹಸನು ಹೊಲ, ಒಂದು ಪಟ್ಟಿ ಸಾಮಾನ್ಯಭೂಮಿ, ಒಂದು ಪಟ್ಟಿ ಬಣ ಭೂಮಿ. ಪಟ್ಟಿಯೆಂದರೆ ಗೊತ್ತೆ? ದೊಡ್ಡ ಹೊಲವನ್ನು ಭಾಗಮಾಡಿ ಬೇರೆಮಾಡಿದ ಸಣ್ಣ ತುಂಡು, ಒಂದು ಹೋಳು, ಸೀಳು. ನಮ್ಮ ನಾಡಿನ ಹಿಡುವಳಿಗಳೆಲ್ಲ ಅಷ್ಟೆ. ದೊಡ್ಡ ದೊಡ್ಡ ಹಿಡುವಳಿಗಳನ್ನು ಒಡೆದು ಮಾಡಿದ ಚೂರು ಚೂರು ಪಟ್ಟಿ, ಸಣ್ಣ ಸಣ್ಣ ಹೋಳು. ಕೆಲವು ಕಡೆ ಈ ತುಂಡುಗಳಲ್ಲಿ ಉಳುವಾಗ ಎತ್ತನ್ನು ತಿರುಗಿಸಿಕೊಳ್ಳುವುದೂ ಕಠಿಣ; ಅಷ್ಟು ಚಿಕ್ಕವು! ಇದನ್ನೇ ಇತಿಹಾಸದಲ್ಲಿ ಹಿಡುವಳಿಗಳ ವಿಭಜನವೆನ್ನುತ್ತಾರೆ. ಈ ಹಂಚುವಾಟ ಎಲ್ಲಿಯ ತನಕ ಹೋಗಿದೆಯೆಂದರೆ ಕೆಲವರು ಮರಹಂಚಿಕೊಳ್ಳುವುದು ಸಾಲದೆ ಮರದ ಕೊಂಬೆಗಳನ್ನೂ ಹಣ್ಣನ್ನೂ ಹಂಚಿಕೊಂಡಿದ್ದಾರೆ!



ನಮ್ಮ ಜನಬಲ ಧನಬಲ ಎರಡೂ ವ್ಯರ್ಥ ಎಂದು ಇದಕ್ಕೆ ಅರ್ಥ. ಇದರಿಂದ ವರ್ಷಕ್ಕೆ ನಾಲ್ಕು ತಿಂಗಳು ರಾಮನಿಗೆ ಮಾಡಲು ಏನೂ ಕೆಲಸವಿಲ್ಲದಾಗಿದೆ. ಧನದ ಉಪಯೋಗವೂ ಎಷ್ಟು ಬೇಕೋ ಅಷ್ಟು ಆಗದು. ಹೊಲ ಸಣ್ಣ ಸಣ್ಣ ಪಟ್ಟಿಯಾದುದರಿಂದ ಬೇಲಿಹಾಕುವುದು ಬಹಳ ವೆಚ್ಚದ ಕೆಲಸ. ಬೇಲಿಯಿಲ್ಲದಿದ್ದರೆ ತುಡುಗುದನ ಹೊಲಕ್ಕೆ ನುಗ್ಗಿ ಮೇದು ಪೈರು ಕೆಡಿಸುತ್ತವೆ. ಅಲ್ಲದೆ ಇಂಥ ಚಿಕ್ಕ ಚಿಕ್ಕ ತುಂಡು ಹೊಲಗಳಿಗೆ ದೊಡ್ಡ ದೊಡ್ಡ ಮೋಟರು ನೇಗಿಲು ಮೊದಲಾದ ಯಂತ್ರಗಳನ್ನು ಕೊಳ್ಳುವುದಾಗಲಿ ಕೊಂಡು ಬಳಸುವುದಾಗಲಿ ಹೇಗೆ? ಒಂದು ವೇಳೆ ನೀರಿನ ಅನುಕೂಲವಿದ್ದರೂ ಬೇರೆಯವರ ಹೊಲದಲ್ಲಿ ಕಾಲುವೆ ತೋಡದೆ ಈ ನಾಲ್ಕೂ ದಿಕ್ಕಿನ ಚಿಕ್ಕ ಪಟ್ಟಿಗಳಿಗೆ ಅದನ್ನೊದಗಿಸುವುದು ಹೇಗೆ? ಆದರಿಂದ ನೆರೆಹೊರೆಯ ರೈತರೊಡನೆ ಜಗಳವೇ ತಾನೆ?



ರಾಮು, ಅವನ ಐವರ ಕುಟುಂಬ, ಎರಡೆತ್ತು; ಇಂಥ ರೈತನಿಗೆ 20 ಎಕರೆಯಾದರೆ ಅವನಿಗೂ ಅವನ ಎತ್ತಿಗೂ ಸಾಕಷ್ಟು ಕೆಲಸ ದೊರೆತು ಅವುಗಳ ಉಪಯೋಗ ಸರಿಯಾಗಿ ಆಗುತ್ತದೆ. ಕೆಲಸ ಬಲವಾದ ಕಾಲದಲ್ಲಿ ಒಂದೆರಡು ಕೂಲಿಯಾಳನ್ನಿಟ್ಟುಕೊಂಡು ಇಷ್ಟು ಹೊಲವನ್ನು ಅವನು ನೋಡಿಕೊಳ್ಳಬಲ್ಲ. ಆದರಿಂದ ಈಗ ಸಿಗುವುದರ ಐದರಷ್ಟು ಬೆಳೆಬರುತ್ತದೆ. ಚಲೋ ಬೀಜ ತರಲಿಕ್ಕೆ, ಸೌದೆಕೊಳ್ಳಲಿಕ್ಕೆ, ಹೊಸ ಮುಟ್ಟು ಮಾಡಲಿಕ್ಕೆ ಎಷ್ಟೋ ಹಣ ಅವನಿಗೆ ಉಳಿತಾಯವಾದೀತಲ್ಲವೆ!

ಹಾಗಾದರೆ ಈಗಿರುವ ನಾಲ್ಕರ ಜೊತೆಗೆ ಇನ್ನೂ 16 ಎಕರೆ ಹೊಲವನ್ನು ರಾಮುನಿಗೆ ಕೊಡಿಸಲು ನಮಗೇನಾದರೂ ದಾರಿಯಿದೆಯೇ? ಅವನ ನೆರೆಯ ರೈತರಿಂದ ಕಸಿದುಕೊಳ್ಳುವುದು ಒಂದು ರೀತಿ. ಕೆಲವು ದೇಶದಲ್ಲಿ ಹಾಗೆ ಮಾಡಿದಾರೆ. ಮಾಡಿ ದೊಡ್ಡ ದೊಡ್ಡ ಪ್ರಮಾಣದ ಹಿಡುವಳಿ ಏರ್ಪಡಿಸಿದಾರೆ. ಹೌದು, ಆದರೆ ಹೊಲ ಕಸಿದುಕೊಂಡರೆ ರೈತರೇನು ಮಾಡಬೇಕು. ಆ ದೇಶಗಳ ಪಟ್ಟಣಗಳಲ್ಲಿ ಅವರಿಗೆ ಕಾರಖಾನೆಗಳಲ್ಲಿ ಕೆಲಸ ಸಿಗುತ್ತದೆ. ಹಿಂದುಸ್ಥಾನದಲ್ಲಿ ಕಾರಖಾನೆಗಳಾದರೂ ಎಷ್ಟಿವೆ? ಬಹಳ ಸ್ವಲ್ಪ. ಆದರೆ 15 ಕೋಟಿ ಎಕರೆ ಭೂಮಿ—ಸಾಗುವಳಿಗೆ ಯೋಗ್ಯವಾದುದು—ಬೀಳು ಬಿದ್ದಿದೆ. ಇದನ್ನೆಲ್ಲ ಸಾಗುವಳಿ ಮಾಡಿಸಿದರೂ ಅದರಿಂದ ತಲಾ ಒಂದೆಕರೆ ಹೆಚ್ಚಿಗೆ ದೊರೆತೀತು ರೈತರಿಗೆ. ಇರಲಿ, ಆದರೆ ಅಲ್ಲಿಯ ತನಕ?

ಅಲ್ಲಿಯ ತನಕ ಬೇರೇನೂ ಇಲ್ಲ. ರಾಮುನೂ ಅವನ ನೆರೆಯ ರೈತರೂ

ಒಟ್ಟು ಸೇರಿ ತಮ್ಮ ತಮ್ಮ ಹೊಲಗಳ ಬೇಲಿ ಕಿತ್ತಿ ಬದು ಕಡಿದು ಎಲ್ಲಾ ಹೊಲವನ್ನೂ ಪಾಲುಗಾರರ ಹಾಗೆ ಜೊತೆಯಲ್ಲಿ ಬೇಸಾಯ ಮಾಡುವುದೊಂದೇ ದಾರಿ.

ರಾಮುನ ಪಕ್ಕದಲ್ಲಿರುವ ರೈತರು ನಾಲ್ಕು ಜನಕ್ಕೂ ನಾಲ್ಕು ನಾಲ್ಕು ಎಕರೆ ಹೊಲ ಇದ್ದರೆ ಐವರಿಗೂ ಒಟ್ಟಿಗೆ 20 ಎಕರೆಯಾಯಿತು. ಒಟ್ಟಿಗೆ ಅವರಿಗೆಷ್ಟು ಬೆಳೆ ಬರಬೇಕು ಆಗ? 'ಈಗ ರಾಮುನಿಗೆ ಬರುವುದರ ಐದರಷ್ಟು' ಎನ್ನುತ್ತೀರಿ ನೀವು. ಅಲ್ಲ! ಐದುಜನ ಒಂದು ಹೊಲದಲ್ಲಿ ಕೆಲಸಮಾಡುವಾಗ ನಮ್ಮ ಹಳೆಯ ಗೆಳೆಯ 'ಶ್ರಮವಿಭಾಗ' ಅಲ್ಲಿ ಹಣಿಕಿಹಾಕುವುದಿಲ್ಲವೆ? ತಮ್ಮೊಳಗೆ ಒಬ್ಬರು ಒಂದು ಬಗೆಯ ಕೆಲಸದಲ್ಲಿ ನಿಪುಣರೆಂದೂ ಇನ್ನೊಬ್ಬರು ಇನ್ನೊಂದು ತರದ ಕೆಲಸದಲ್ಲಿ ಕುಶಲರೆಂದೂ ರಾಮುನಿಗೂ ಅವನ ಗೆಳೆಯರಿಗೂ ಗೊತ್ತಾಗುತ್ತದೆ. ತಮ್ಮ ಚಿಕ್ಕ ಚಿಕ್ಕ ತುಂಡುಗಳಲ್ಲಾದರೆ ಪ್ರತಿಯೊಬ್ಬರೂ ಒಂದೂ ಸರಿಯಾಗಿ ಬಾರದ ಸಕಲ ವಿದ್ಯಾಪ್ರವೀಣರಾಗಬೇಕಾಗುತ್ತಿತ್ತು. ಈಗಲೋ ಒಬ್ಬೊಬ್ಬನು ಒಂದೊಂದಕ್ಕೆ ಪೂರ್ಣವಾಗಿ ಗಮನಕೊಡಬಹುದು. ಹೀಗಾಗಿ ಒಂದಕ್ಕೆ ಐದರಷ್ಟಲ್ಲ ಆರೇಳರಷ್ಟು ಹೆಚ್ಚು ಬೆಳೆಯುತ್ತದೆ ಭೂಮಿ.

ಇಷ್ಟೇ ಅಲ್ಲ. ಅವರಿಗೆ ಒಂದೇ ಜೊತೆ ಎತ್ತು ಸಾಕು. ಮಿಕ್ಕ ನಾಲ್ಕು ಜೊತೆ ಮಾರಿದರೆ



ಅವನ್ನು ಮೋಯಿಸುವ ವೆಚ್ಚ ತಪ್ಪುವುದಲ್ಲದೆ ಅವನ್ನು ಮಾರಿ ಬಂದ ಹಣದಲ್ಲಿ ಒಂದೆರಡು ಯಂತ್ರಗಳನ್ನೋ ಚಲೋ ಗೊಬ್ಬರವನ್ನೋ ಕೊಳ್ಳಬಹುದು. ಹೀಗೆ ಕೆಲವು ಸಲ—**ಕೆಲವು ಸಲ ಮಾತ್ರವೇ**—4×5 ಲೆ. 30 ಆಗುತ್ತದೆಯಲ್ಲವೆ! ಸಹಕಾರವಿದ್ದ ಕಡೆ, ಅಂದರೆ ಒಂದು ಕೆಲಸಮಾಡಲು ನಾಲ್ಕೆಂಟುಜನ ಕೈಹಾಕಿದ ಕಡೆ, ಹೀಗೆ ಆಗುತ್ತದೆ. ಎಲ್ಲರಿಗೂ ಆದರಿಂದ ಅನುಕೂಲವೇ. ಹಿಂದುಸ್ಥಾನದಲ್ಲಿ ಕೆಲವುಕಡೆ—ಮುಖ್ಯವಾಗಿ ಪಂಜಾಬಿನಲ್ಲಿ ಹೀಗೆ ಮಾಡಿದಾರೆ. ಒಳ್ಳೆ ಫಲವೂ ಆಗಿದೆ. ಇಂಥ ಸಮಷ್ಟಿ ವ್ಯವಸಾಯ ಸಂಘಗಳು ನಮ್ಮ ನಾಡಿನಲ್ಲೆಲ್ಲ ಹುಟ್ಟಬೇಕಾದುದು ಬಹಳ ಅಗತ್ಯ.

ಸದ್ಯಕ್ಕೆ ಸಾಗುವಳಿಗೆ ಯೋಗ್ಯವಾಗಿ, ಸಾಗದೆ ಇರುವ 15 ಕೋಟಿ ಎಕರೆ ಜೀಳು ಭೂಮಿಯನ್ನೆಲ್ಲ ಹಾಗೆ ಬೇಸಾಯಮಾಡಲು ಮೊದಲಿಡಬಹುದಷ್ಟೆ.

ಇದೆಲ್ಲ ಬಡಸೆಲಬಿರಬೇಕು. ಇರದಿದ್ದರೆ ಜೀಳಾಗುತ್ತಿರಲಿಲ್ಲ. ಇದನ್ನು 100 ಎಕರೆಗೊಂದು ಹಿಡುವಳಿಯಂತೆ ಹಂಚಿ ನಾಲ್ಕುಮಂದಿ ರೈತರಿಗೆ ಸಕುಟುಂಬ ವಾಗಿ ಅಲ್ಲಿರಲು ಅನುಕೂಲಮಾಡಿ, ಅಂಥ ಹಿಡುವಳಿ ಪ್ರತಿಯೊಂದಕ್ಕೂ 500 ರೂ. ವೆಚ್ಚಮಾಡಿ ನೆಲ ಹಸನಾಗಿಸಿ, ನೀರಿಗಾಗಿ ಕಾಲುವೆ ತೋಡಿ, ಪೇಟೆಗೆ ಹೋಗಲು ದಾರಿಮಾಡಿ, ಯಂತ್ರಗಳನ್ನೂ ದನವನ್ನೂ ಕೊಂಡುಕೊಟ್ಟರೆ— ಹತ್ತು ವರ್ಷದ ನಂತರ ಈ 15 ಕೋಟಿ ಎಕರೆ 800 ಕೋಟಿ ರೂಪಾಯಿನ ಬೆಳೆ ಬೆಳೆಯುತ್ತದೆಯಂತೆ. ಹಿಂದುಸ್ಥಾನ ಈಗ ಬೆಳೆವುದರಲ್ಲಿ ಇದು ಮೂರರೊಳ ಗೆರಡು ಪಾಲಿನಷ್ಟಾಗುತ್ತದೆ.

ಅಹಾ, ಎಷ್ಟು ಸೊಗಸು! ಆದರೆ ನಮ್ಮ ಸಾರವಂತ ಭೂಮಿಯನ್ನೂ ಶ್ರೇಷ್ಠಭೂಮಿಯನ್ನೂ ಈಗ ಮಾಡುವ ಹಾಗೆ ಬೇಸಾಯಮಾಡಲು ಬಿಡ ಬಾರದು. ಬಿಡಬಹುದೇ ಹೇಳಿ? ಸಮಷ್ಟಿ ವ್ಯವಸಾಯ ಚಲೋದೇ. ಆದರೆ ನಮ್ಮ ರೈತನಿಗೆ ತಿಳುವಳಿಕೆಯಿಲ್ಲವಲ್ಲ. ಆದುದರಿಂದ ಸರಕಾರವು ನಡುವೆ ಕೈಹಾಕಿ ದೊಡ್ಡದೊಡ್ಡ ಹಿಡುವಳಿಮಾಡುವ ಹಾಗೆ ಬಲವಂತಗೊಳಿಸಬೇಕು.

ಜರ್ಮನಿಯಲ್ಲಿ ಹಿಟ್ಲರನ ಸರಕಾರ ಒಂದು ಶಾಸನಮಾಡಿತು. ಪ್ರತಿ ಯೊಂದು ಹಿಡುವಳಿಯೂ ಒಂದು ಕುಟುಂಬಕ್ಕೆ ಅನ್ನ, ಬಟ್ಟೆ, ಉಳಿದೆಲ್ಲ ಅನು

ಕಾಲುವೆ ಯಂತ್ರ ದನ







ರೂ.500




ರೂಪಾಯಿ 5,333

ಕೂಲಗಳನ್ನೂ ಒದಗಿಸುವಷ್ಟು ದೊಡ್ಡದಾಗಿರಬೇಕು. ಒಬ್ಬನೇ ರೈತ ಬಹಳ ಹೊಲವನ್ನು ಬಾಚಿಕೊಂಡು ಉಳಿದವರನ್ನು ಓಡಿಸುವಂತೆ ಹಿಡುವಳಿ ತೀರಾ ದೊಡ್ಡದೂ ಆಗಬಾರದೆಂದು ಕೂಡ ಶಾಸನವಾಯಿತು. ಈ ಶಾಸನದ ಪ್ರಕಾರ ಆದ ಹಿಡುವಳಿಗಳನ್ನು ಒಡೆದು ಹಂಚಲಿಕ್ಕಾಗಲಿ, ಪಾಲಿಗೆ ಕೋರಿಗೆ ಕೊಡಲಿಕ್ಕಾಗಲಿ, ಸಾಲಕ್ಕೆ ಅಡಪಿಡಲಾಗಲಿ ಬಾರದು.

ಶಾಸ್ತ್ರೀಯ ವ್ಯವಸಾಯದಲ್ಲಿ 'ಸೋವಿಯೆಟ್' ರಷ್ಯಾದವರು ಮುಂಬರಿದಿದಾರೆ. ನೂರಾರು ಜನ ದುಡಿವಂಥ ದೊಡ್ಡದೊಡ್ಡ ಸಮಷ್ಟಿಕ್ಷೇತ್ರಗಳನ್ನು ಮಾಡಿದಾರೆ. ಅವುಗಳಲ್ಲೆಲ್ಲ ಹಿರಿದಾದ 'ಜಿಗಾಂಟ್' ಕ್ಷೇತ್ರ ಬಡಗಲಿಂದ ತೆಂಕಲಿಗೆ 50 ಮೈಲಿ, ಮೂಡಲಿಂದ ಪಡುವ 40 ಮೈಲಿ ವಿಸ್ತಾರವಾಗಿದೆ. 17 ಸಾವಿರ ಜನ ಅದರಲ್ಲಿ ದುಡಿಯುತ್ತಿದಾರೆ. ಅಲ್ಲಿರುವ ಸುಗ್ಗಿಯ ಯಂತ್ರ ಪೈರು ಕೊಯ್ದು ತುಳಿಸಿ ತೂರಿ ಹಸನುಮಾಡುತ್ತದೆ. ನಡೆಯಿಸಲು ಒಬ್ಬನಾದರೆ ಸಾಕು ಆ ಯಂತ್ರವೊಂದೇ ನೂರಾರು ಆಳು ಮಾಡುವ ಕೆಲಸವನ್ನು ಮಾಡುತ್ತದೆ. ಜಗತ್ತಿನ ಇತಿಹಾಸದಲ್ಲೇ ಇದೊಂದು ಹೊಸ ಸಂಗತಿ! ಸುತ್ತಲೂ ಗೋಡೆ, ಮೇಲೆ ಛಾವಣಿ ಇಲ್ಲದ ದೊಡ್ಡ ಕಾರಖಾನೆ! 1919ರಲ್ಲಿ ಆದ ರಷ್ಯಾ ರಾಜ್ಯಕ್ರಾಂತಿಗೆ ಮೊದಲು ರಷ್ಯಾದ ರೈತರು ನಮ್ಮ ದೇಶದ ಒಕ್ಕಲಿಗರು ಈಗ ಮಾಡುತ್ತಿರುವ ಹಾಗೇ ಸಣ್ಣ ಸಣ್ಣ ಸೀಳುಗಳ ಬೇಸಾಯಮಾಡುತ್ತಿದ್ದರು.



ಹನುಮಂತನಂತೆ ಶತಯೋಜನ ಹಾರಿ ಅವರು ನಮಗಿಂತ ಎಷ್ಟೋ ಮುಂದೆ ಹೋಗಿದಾರೆ ಈಗ. ರಷ್ಯಾ ರೈತನಿಗೆ ಈಗ ಮುಖ್ಯ ಸ್ನೇಹಿತನೆಂದರೆ 'ಕಬ್ಬಿಣಗುದುರೆ' (ಮೋಟಾರು ನೇಗಿಲಿಗೆ ಆ ಹೆಸರು).

1935ರಲ್ಲಿ ನಾನು ರಷ್ಯಾಕ್ಕೆ ಹೋದಾಗ ಆ ದೇಶದಲ್ಲಿ ಸಾವಿರಾರು ಮೈಲಿ ವಿಮಾನಪ್ರಯಾಣ ಮಾಡಿದೆ. ಅಲ್ಲಿನ ಭೂಮಿ ಇಂಗ್ಲೆಂಡ್ ಫ್ರಾನ್ಸ್ ಹಿಂದುಸ್ಥಾನಗಳ ಭೂಮಿಗಿಂತ ಬೇರೆ ರೀತಿಯಾಗಿ ಕಂಡುಬರುವುದನ್ನು ನೋಡಿದೆ.

ಈ ದೇಶಗಳಲ್ಲಿ ಭೂಮಿ ವಿವಿಧಾಕಾರದ ನಾನಾ ಪ್ರಮಾಣಗಳ ತುಂಡುಗಳಾಗಿ ಹಂಚಲ್ಪಟ್ಟು ಚಿತ್ರ ಸ್ಪರ್ಧೆಯ ವಿಚಿತ್ರ ಪುಟದಂತೆ ಕಾಣುತ್ತದೆ. ಅದೇ ರಷ್ಯಾದಲ್ಲಿ ಚದುರಂಗಪಟದ ಹಾಗೆ ಹೊಲಗಳು ಚೌಕಮನೆಗಳಾಗಿಯೂ ಹುಲ್ಲು ಬಣವೆಗಳೂ ವಾಸದ ಮನೆಗಳೂ ಆಟದ ಕಾಯಾಗಿಯೂ ಕಾಣುತ್ತವೆ.

ಆವಿರ್ಾನಿಯಾ ಪ್ರಜಾಪ್ರಭುತ್ವದಲ್ಲಿ ಪರಕ್ಕಾರ್ ಎಂಬ ಹಳ್ಳಿಗೆ ಹೋಗಿದ್ದೆ. ಈ ಹತ್ತು ವರ್ಷಗಳಲ್ಲಿ ಆ ಹಳ್ಳಿ ಹಳೆಯ ಪದ್ಧತಿಯನ್ನು ಬಿಟ್ಟು ಸಮಷ್ಟಿವ್ಯವಸಾಯಕ್ಕೆ ಬಂದಿದೆ. ಅಲ್ಲಿ 250 ಕುಟುಂಬ ಸೇರಿ ದುಡಿಯುತ್ತಿವಾರೆ. ಇದರ ಫಲವಾಗಿ ಮೊದಲು 240 ಕಿಲೊಗ್ರಾಮ್ ಆಗುತ್ತಿದ್ದ ಹತ್ತಿ ಈಗ 640 ಕಿಲೊಗ್ರಾಮ್‌ಗಳ ತನಕ ಏರಿದೆ.

ನಾವಿಲ್ಲಿ ಚರ್ಚೆಮಾಡಿದ ವಸ್ತುಗಳಲ್ಲಿ ಕೆಲವಾದರೂ ಸಿಕ್ಕರೆ ನಾವೂ ಹಿಂದುಸ್ಥಾನದಲ್ಲಿ ದೊಡ್ಡದೊಂದು ಹೆಜ್ಜೆ ಮುಂದೆ ಹೋಗಬಹುದು. ಏನೂ ಸಂಶಯವಿಲ್ಲ. ಐದೇ ಐದು ಮಹತ್ವಾದ ಕೆಲಸಮಾಡಿದರಾಯಿತು. ನಮಗೂ ಇಂಗ್ಲಿಷರಿಗೆ ಅವರ ಹೊಲದಿಂದ ಬಂದಷ್ಟು ಉತ್ಪನ್ನ ನಮ್ಮ ಹೊಲಗಳಲ್ಲಿ ದೊರೆತು ಇಸ್ಪೀಟಿನ ಮನೆಯ ಬದಲು ಕಲ್ಲು ಮಣ್ಣಿನ ಮನೆಯನ್ನೇ ಕಟ್ಟಬಹುದು.

ಈ ಐದು ಮಹತ್ವಾದ ಕೆಲಸಗಳೇನು?

## ಸಮಷ್ಟಿ ವ್ಯವಸಾಯ



1. 20 ಎಕರೆಗಿಂತ ಕಡಮೆಯಾಗದ ಹಾಗೆ ಹೊಲಗಳನ್ನೆಲ್ಲ ತಿರುಗಿ ಹಂಚಬೇಕು. ಸದ್ಯ ಸಾಗುವಳಿಯಿಲ್ಲದೆ ಬೀಳುಬಿದ್ದಿರುವ ಭೂಮಿಯನ್ನು ನೂರು ನೂರು ಎಕರೆಯ ಸಮಷ್ಟಿ ಕ್ಷೇತ್ರಗಳಾಗಿ ಹಂಚಿ, ಈಗಾಗಲೇ ತಮ್ಮ ಹೊಲ ಸಾಗುಮಾಡುತ್ತಿರುವ ರೈತರನ್ನು ತಮ್ಮ ತಮ್ಮ ನೆರೆಹೊರೆಯ ರೈತರೊಡನೆ ಕಲೆತು ಸಮಷ್ಟಿ ಪದ್ಧತಿಯನ್ನು ಅವಲಂಬಿಸುವಂತೆ ಪ್ರೋತ್ಸಾಹಿಸಬೇಕು.

## ಕಾಲುವೆಗಳು



2. ಬಾವಿ ಕಾಲುವೆಗಳನ್ನು ತೋಡಿ ಈಗಿನಂತೆ ಐದರಲ್ಲೊಂದು ಪಾಲಲ್ಲದೆ ಇಡೀ ದೇಶವೇ ನೀರಾವರಿಯಾಗುವಂತೆ ಮಾಡಬೇಕು.

## ಕಾಡು ಬೆಳೆಸುವುದು ಮತ್ತು ಗೊಬ್ಬರ ಕಲಸುವುದು



3. ನಮ್ಮ ಅಡವಿಯನ್ನು ಕಾಪಾಡಿ ಉರವಲಿಗಾಗಿ ಅದರಿಂದ ಸೌದೆ ದೊರಕಿಸಿ ಬೇರೆ ಗೊಬ್ಬರಗಳ ಜೊತೆಗೆ ಸಗಣಿಯನ್ನು ಗೊಬ್ಬರವಾಗಿ ಬಳಸುವಂತೆ ಮಾಡಬೇಕು.

## ಬೀಜ ಮತ್ತು ಯಂತ್ರ



4. ಒಳ್ಳೆಯ ಜಾತಿಯ ಬೀಜಗಳನ್ನೂ ಹೊಸ ಕಾಲದ ಮುಟ್ಟನ್ನೂ ಉಪಯೋಗಿಸುವಂತೆ ನಮ್ಮ ರೈತರಿಗೆ ಹೇಳಿಕೊಡಬೇಕು.

# ದನ



5. ಮೇವು ಸಾಲದೆ ಕೆಲಸಕ್ಕೆ ಬಾರದ ದನಗಳನ್ನು ಕಡಮೆ ಮಾಡಿ ಇದ್ದವನ್ನು ಚೆನ್ನಾಗಿ ಮೇಯಿಸಿ ಸಲಹಬೇಕು.

ಇಷ್ಟು ಮಾಡಿದರೆ ಹಿಂದುಸ್ಥಾನದ ಮೋರೆ ಬದಲಾಗಿ ಮುಗುಳುನಗೆಯಾದೀತು. ಆದರೆ ಇದೆಲ್ಲ ಆಗಬೇಕಾದರೆ ಮೊದಲು ಒಂದು ಕೆಲಸವಾಗಬೇಕು. ಅವರವರ ಹೊಲಗಳಿಂದ ಕೆಲವು ರೈತರನ್ನು ಬಿಡಿಸುತ್ತೇವಲ್ಲ, ಅವರಿಗೇನಾದರೂ ಕೆಲಸ ಕೊಡಬೇಕು.

# VIII

# ಗಿಡದಲ್ಲಿ ಉಣ್ಣೆ

'ಹಣ್ಣು ಕಾಯಿಗೆ ಬದಲಾಗಿ ಕುರಿಯ ತುಪ್ಪಟಕ್ಕಿಂತ ಸಯವಾದ ಸೊಗಸಾದ ಉಣ್ಣೆಯನ್ನು ಕೊಡುತ್ತದೆ ಆ ಗಿಡ. ಆ ಉಣ್ಣೆಯಿಂದ ಹಿಂದೀಜನ ತಮ್ಮ ಬಟ್ಟೆಬರೆ ಮಾಡಿಕೊಳ್ಳುತ್ತಾರೆ'. ಗ್ರೀಕ್ ಇತಿಹಾಸಕಾರ ಹೆರೊಡೊಟಸ್ ನಮ್ಮ ಯಕ್ಷಿಣೀ ಗಿಡವಾದ **ಹತ್ತಿಯನ್ನು** ಹೀಗೆ ವರ್ಣಿಸಿದ. ಆ ಕಾಲದಲ್ಲಿ ನಮ್ಮ ದೇಶಕ್ಕೆ ಬಂದಿದ್ದ ಪರದೇಶದ ಯಾತ್ರಿಕನೊಬ್ಬನಿಗೆ ಇದನ್ನು ನೋಡಿ ತುಂಬಾ ಸೋಜಿಗವಾಗಿ 'ಇದೇನೋ ಗಿಡದಲ್ಲಿ ಹುಟ್ಟುವ ಕುರಿಮರಿ, ಸುತ್ತಲಿನ ಗಿಡಗಳನ್ನು ತಿನ್ನುತ್ತದೆ' ಎಂದು ವರ್ಣಿಸಿದ.

ಈಚೆಗೆ ಸಿಂಧ್ ಪ್ರಾಂತದ ಮೊಹೆಂಜೊ-ದಾರೊ ಪ್ರದೇಶದಲ್ಲಿ ಹಾಳುಬಿದ್ದ ಪುರಾತನ ಪಟ್ಟಣವೊಂದರ ಗುರುತು ಕಂಡುಬಂದವು. ಹಿಂದಿನಕಾಲದ ಜನ ಹೇಗಿರುತ್ತಿದ್ದರೋ ಪರೀಕ್ಷೆಮಾಡಲು ಅಲ್ಲೆಲ್ಲ ಅಗೆದರೆ ಅದರಲ್ಲಿ ಕೆಲವು ಹತ್ತಿಯ ಬಟ್ಟೆ ಸಿಕ್ಕವು. ಅವು ಐದು ಸಾವಿರ ವರ್ಷಗಳ ಹಿಂದಿನವಿರಬೇಕೆಂದು ಬಲ್ಲವರು ಹೇಳುತ್ತಾರೆ! ಅಂದರೆ ಇಡೀ ಜಗತ್ತಿನಲ್ಲಿ ಹತ್ತಿಯಿಂದ ಬಟ್ಟೆಮಾಡಿ ಕೊಂಡುದು ಮೊದಲು ನಾವೇ. ಹಿಂದುಸ್ಥಾನದ ಅರಿವೆ ಕಸಬು ಎಷ್ಟು ಹಳೆಯದೆಂಬುದು ಇದರಿಂದ ತಿಳಿಯುತ್ತದೆ. ಇಂದಿಗೂ ನಮ್ಮ ಉದ್ಯೋಗಗಳಲ್ಲಿ ಅದೇ ಹಿರಿದು. ಈ ಪ್ರಕರಣದಲ್ಲಿ ಅದರ ವಿಷಯವನ್ನೇ ತೆಗೆದುಕೊಳ್ಳೋಣ.

ಪುರಾತನಕಾಲದಿಂದಲೂ ಈಸ್ಟ್ ಇಂಡಿಯಾ ಕಂಪನಿಯ ದಿನಗಳ ವರೆಗೆ ಯೂರೋಪಿನ ಪೇಟೆಗಳಿಗೆ ಹಿಂದುಸ್ಥಾನದಲ್ಲಿ ಮಾಡಿದ ಅರಿವೆ ಹೋಗುತ್ತಿತ್ತು. ಬಟ್ಟೆಯ ನಯ ನುಣುಪಿಗೂ ವಿಧವಿಧವಾದ ನೇಯಿಗೆಯ ರೀತಿಗೂ ಹಿಂದು ಸ್ಥಾನದ ನೇಕಾರರನ್ನು ಇಡೀ ಜಗತ್ತಿನಲ್ಲೇ ಹೊಗಳುತ್ತಿದ್ದರು. ಢಾಕಾ

ಮುಸಲಿನ ಜೇಡರಹುಳದ ಪರೆಯಷ್ಟು ನಯ ಎಂದು ಹೋಲಿಸುತ್ತಿದ್ದರು. ಒಂದು ಸಲ ಮೊಗಲ ಬಾದಷಹ ಔರಂಗಜೇಬನು ತನ್ನ ಮಗಳನ್ನು ಮೈಮೇಲೆ ಸಾಕಷ್ಟು ಬಟ್ಟೆಯುಟ್ಟಿಲ್ಲವೇಕೆಂದು ಬೈದನಂತೆ. 'ಏಳು ಸುತ್ತು ಹಾಕಿ ಸೀರೆ ಯುಟ್ಟಿದ್ದೇನೆ' ಎಂದು ಅರಸುಕುವರಿ ಹೇಳಿದಳಂತೆ!

'ಕ್ಯಾಲಿಕೋ' ಬಟ್ಟೆಗಳಿಂದ—ತಮಿಳುನಾಡಿನ ಕ್ಯಾಲಿಕಟ್ (ಕಲ್ಲೀಕೋಟೆ) ಯಿಂದ ಈ ಹೆಸರು ಬಂದಿದೆ—ತಮ್ಮ ಇಂಗ್ಲಿಷು ಬಟ್ಟೆಗೆ ಗಿರಾಕಿಯಿಲ್ಲದೆ ಹೋಗು ತ್ತಿರುವುದನ್ನು ನೋಡಿ 1701 ರಲ್ಲಿ 'ಕ್ಯಾಲಿಕೋ'ವನ್ನು ಪಯೋಗಿಸಕೂಡದೆಂದು ಇಂಗ್ಲೆಂಡಿನಲ್ಲೊಂದು ಶಾಸನವನ್ನೇ ಮಾಡಿಬಿಟ್ಟರು. ಹೊನ್ನೆ ಹೊನ್ನೆ 1815 ರ ವರೆಗೂ ಇಂಗ್ಲೆಂಡೊಂದಕ್ಕೇ ವರ್ಷ ವರ್ಷವೂ 13 ಲಕ್ಷ ಪೌಂಡಿನ ಬಟ್ಟೆ ಮಾರುತ್ತಿತ್ತು ಹಿಂದುಸ್ಥಾನ.

ಅಲ್ಲಿಂದ ಯಂತ್ರದ ಕಾಲ ಬಂತು. ಬಂದಮೇಲೆ ಕಾಲ ತಿರುವು ಮುರುವು ಆಯಿತು. ಲಂಕಾಷೈರಿನ ಅರಿವೆ ಹಿಂದುಸ್ಥಾನದ ಮೇಲೆ ಸುರಿದವು.

ಬಹಳ ಕಾಲದ ವರೆಗೂ ಹಿಂದುಸ್ಥಾನದಲ್ಲಿ ಬಟ್ಟೆ ಗಿರಣಿಗಳು ಸ್ಥಾಪಿತ ವಾಗಲಿಲ್ಲ. 1853 ರಲ್ಲಿ ಮೊದಲನೆ ಗಿರಣಿ ಮುಂಬಯಿಯಲ್ಲಿ ಪ್ರಾರಂಭವಾಯಿತು. ಈಗ ಮುಂಬಯಿಯಲ್ಲಿ 69, ಇಡೀ ಹಿಂದುಸ್ಥಾನದಲ್ಲಿ 390 ಗಿರಣಿಗಳಿವೆ. ಸುಮಾರು 4 ಲಕ್ಷ ಜನ ಗಿರಣಿ ಕೂಲಿಕಾರರಿದಾರೆ. ಮುಂಬಯಿಯ ತರುವಾಯ ಅಹಮದಾಬಾದು ಅರಳೆ ಗಿರಣಿಗಳಿಗೆ ಎರಡನೇ ಕೇಂದ್ರ.

ಈ ಗಿರಣಿಗಳು ವರ್ಷಕ್ಕೆ 400 ಕೋಟಿ ಗಜ ಅರಿವೆಯನ್ನು ನಮ್ಮ ದೇಶಕ್ಕೆ ಒದಗಿಸುತ್ತವೆ. ಈ ಯರಿವೆ ಹಿಂದುಸ್ಥಾನಕ್ಕೆ ಒಂದು ವರ್ಷಕ್ಕೆ ಬೇಕಾಗುವ ಬಟ್ಟೆಯಲ್ಲಿ ⅔ ಪಾಲಿಗಿಂತಲೂ ಕಡಮೆ. ನಮಗೆ ವರ್ಷಕ್ಕೆ ಒಟ್ಟು 625 ಕೋಟಿ ಗಜ ಬಟ್ಟೆ ಬೇಕು. ಎರಡು ರೀತಿಯಲ್ಲಿ ನಮಗಿದು ಒದಗಿಬರುತ್ತದೆ. ಕೊಂಚ ಮಟ್ಟಿಗೆ ಸಣ್ಣಪುಟ್ಟ ಕೈಮಗ್ಗಗಳಲ್ಲಿ ತಯಾರಾಗುತ್ತದೆ. 40 ಲಕ್ಷ ಮಂದಿ ಇಂಥ ಕೈಮಗ್ಗಗಳ ಮೇಲೆ ಕೆಲಸಮಾಡಿ 150 ಕೋಟಿ ಗಜ ಬಟ್ಟೆ ವರ್ಷ ವರ್ಷವೂ ತಯಾರುಮಾಡುತ್ತಾರೆ. ಇಂಗ್ಲೆಂಡು ಜಪಾನು ಮೊದಲಾದ ಪರದೇಶಗಳಿಂದ 75 ಕೋಟಿ ಗಜ ಬಟ್ಟೆ ಕೊಂಡುಕೊಳ್ಳುತ್ತೇವೆ.

ಈದೇನು ವಿಚಿತ್ರ ಎಂದೆನಿಸುತ್ತದೆ ನಿಮಗೆ. ನಮ್ಮ ದೇಶದ ಪ್ರಾಂತ ಪ್ರಾಂತವೂ ಹತ್ತಿಬೆಳೆಗೆ ಎಷ್ಟೋ ಅನುಕೂಲವಾದ ಭೂಮಿಯಾಗಿದ್ದು ನಮಗೆ ಬೇಕಾದ ಬಟ್ಟೆಯನ್ನೆಲ್ಲ ನಾವೇ ತಯಾರುಮಾಡಿಕೊಳ್ಳದೆ ಪರದೇಶದಿಂದ ತರಿಸಲೇಕೆ ?

ನಮಗೆ ಬೇಕಾದಷ್ಟು ಹತ್ತಿಯನ್ನೂ ನಾವು ಬೆಳೆಯದೆ ಇಲ್ಲ ಎಂದು ನಾನು ಹೇಳಿದರೆ ನಿಮಗೆ ಮತ್ತಿಷ್ಟು ಆಶ್ಚರ್ಯವಾಗುತ್ತದೆ. ಬಂಗಾಲ ಬಿಹಾರ ಅಸಾಂ ಸರಹದ್ದು ಪ್ರಾಂತಗಳನ್ನುಳಿದು ಹಿಂದುಸ್ಥಾನದಲ್ಲಿ ಮೂಡಪಡುವ ತೆಂಕಬಡಗ ಎಲ್ಲಾ ಕಡೆಯಲ್ಲೂ ಹತ್ತಿ ಬೆಳೆಯುತ್ತದೆ. ಅಮೇರಿಕದ ಸಂಯುಕ್ತ ರಾಷ್ಟ್ರಗಳ ತರುವಾಯ ನಾವೇ ಇಡೀ ಜಗತ್ತಿನಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಹತ್ತಿ ಬೆಳೆವವರು. ನಮ್ಮ ಹತ್ತಿಯಲ್ಲಿ ಅರ್ಧದಷ್ಟನ್ನು, ಸುಮಾರು 30 ಲಕ್ಷ ಗಂಟು, ವರ್ಷ ವರ್ಷವೂ ಪರದೇಶಗಳಿಗೆ ಮಾರುತ್ತೇವೆ. ಅದರಲ್ಲರ್ಧ ನಮ್ಮ ಪ್ರತಿಸ್ಪರ್ಧಿ ಜಪಾನು



ಕೊಂಡು ಅಲ್ಲಿ ಅರವೆಮಾಡಿ ಮತ್ತೆ ನಮಗೇ ಉಟ್ಟು ತೊಡಲಿಕ್ಕೆ ಕಳಿಸುತ್ತದೆ. ನಮ್ಮ ಕೂಲಿಕಾರರು ಮಂದರಾಸು. ನಮ್ಮ ಗಿರಣಿಮಾಲಕರೂ ಅಸಮರ್ಥರು. ನಮ್ಮ ಗಿರಣಿ ಯಂತ್ರಗಳಂತೂ ತೀರಾ ಹಳೆ ಲೊಡ್ಡು. ಇದರಿಂದ ನಮ್ಮ ಹತ್ತಿಯಿಂದಲೇ ಬಟ್ಟೆಮಾಡಿ ಜಪಾನು ನಮ್ಮ ಮುಂಬಯಿ ಅಹಮದಾಬಾದುಗಳಲ್ಲಿ ಮಾಡಿದ ಬಟ್ಟೆಗಿಂತ ಅಗ್ಗವಾಗಿ ನಮಗೇ ಮಾರುವ ಹಾಗಾಗಿದೆ!

ಇಷ್ಟೇ ಅಲ್ಲ. ಇಷ್ಟು ಹತ್ತಿ ಇಲ್ಲೇ ನಮ್ಮ ಕೈಯಲ್ಲೇ ಇದ್ದರೂ ನಮ್ಮ ಗಿರಣಿ ಅಮೇರಿಕಾ ಈಜಿಪ್ಟ ಆಫ್ರಿಕಾಗಳಿಂದ ಹತ್ತಿ ತರಿಸಿಕೊಳ್ಳುತ್ತವೆ! ನಮ್ಮ ಹತ್ತಿ 'ಸಣ್ಣಹತ್ತಿ' ಸಣ್ಣ ತೊಳೆಯದು. ನಯವಾದ ಬಟ್ಟೆಮಾಡಲು 'ದೊಡ್ಡ ಹತ್ತಿ', ದೊಡ್ಡ ತೊಳೆಯದು ಬೇಕು.

ಇದೆಲ್ಲದರಿಂದ ಮೂರು ಮಾತು ಒಡೆದುಕಾಣುತ್ತವೆ. ನಮ್ಮ ಹತ್ತಿಯಲ್ಲಿ ಅರ್ಧದಷ್ಟು ನಾವು ರಫ್ತುಮಾಡುತ್ತೇವೆ; ಬೇರೊಂದು ತರದ ಹತ್ತಿಯನ್ನು ಆಮದುಮಾಡುತ್ತೇವೆ; ನಾವು ತೊಡುವ ಬಟ್ಟೆಯಲ್ಲಿ ಎರಡಾಣೆ ಪಾಲು ಹೊರಗಿನಿಂದ ತರಿಸುತ್ತೇವೆ. ಯೋಚನೆಮಾಡಿ ನೋಡಿದರೆ ಈ ಮೂರರಲ್ಲಿ **ಯಾವುದನ್ನೇ ಆಗಲಿ** ನಾವೇಕೆ ಮಾಡಬೇಕೋ? ಕಾರಣವೇ ಇಲ್ಲ.

ಮೊಟ್ಟಮೊದಲು, ನಾವು ಹತ್ತಿಯನ್ನು ಅವರಿಂದ ಕೊಳ್ಳುವ ಕಾರಣವೇ ಇಲ್ಲ. 'ನಮ್ಮ ಹೆಂಗಸರಿಗೆ ತೆಳುವಾದ ಸೀರೆ ನೇಯಲು ನಮಗೆ ಉದ್ದ ತೊಳೆಯ ದೊಡ್ಡಹತ್ತಿ ಬೇಕು' ಎನ್ನುತ್ತಾರೆ ನಮ್ಮ ಗಿರಣಿಮಾಲಿಕರು. ಮಹಾತ್ಮಾ ಗಾಂಧೀಜೀ ಎಷ್ಟೇ ಬೇಡವೆಂದರೂ ಚೆಲುವೆಯರಿಗೆ ತೆಳುವಾದ ಮಿದುವಾದ ಸೀರೆಗಳೇ ಬೇಕು. ಆದುದರಿಂದ ಅಂಥ ಹತ್ತಿಯನ್ನೇ ನಾವು **ಬೆಳೆಯೋಣ**. ನಾವೀಗ ಸಣ್ಣಹತ್ತಿ ಬಹಳ ಬೆಳೆಯುತ್ತಿದೇವೆ. ದೊಡ್ಡತೊಳೆ ಹತ್ತಿ ಕಡಮೆ. ಚಲೋ ಹೊಲಕ್ಕೂ ಒಳ್ಳೆ ಒಕ್ಕಲಿಗರಿಗೂ ನಮ್ಮಲ್ಲೇನು ಕಡಮೆಯಿಲ್ಲ. ಮಾಡಬೇಕಾದುದಿಷ್ಟೆ. ಚಲೋ ಬೀಜ ಅವರಿಗೆ ಆರಿಸಿಕೊಟ್ಟು ಈಗ ಬೆಳೆವ ಸಣ್ಣಹತ್ತಿಯ ಬದಲು ದೊಡ್ಡದನ್ನು ಬೆಳೆವ ಹಾಗೆ ಪ್ರೋತ್ಸಾಹಿಸಬೇಕು. ಅಷ್ಟು ಮಾಡಿದರೆ ಒಂದೇ ಒಂದು ಗಂಟು ಹತ್ತಿಯನ್ನಾದರೂ ಹೊರಗಿಂದ ಹಿಂದುಸ್ಥಾನಕ್ಕೆ ಆಮದು ಮಾಡುವ ನೆಪ ತಪ್ಪುತ್ತದೆ.

ಆದರೂ ಪರದೇಶದಿಂದ, ಮುಖ್ಯವಾಗಿ ಲಂಕಾಷ್ಯೈರು ಜಪಾನುಗಳಿಂದ ಬಟ್ಟೆ ಆಮದುಮಾಡುವುದೊಂದು ಹಾಗೇ ಉಳಿಯಿತಲ್ಲ. ಈಗಾಗಲೇ ಮೊದಲಿನಷ್ಟು ವಿಶೇಷವಾಗಿ ಬರದಿದ್ದರೂ ನಮ್ಮ ಆಮದು ಪಟ್ಟಿಯಲ್ಲಿ ಎಲ್ಲಕ್ಕಿಂತ ಹೆಚ್ಚಾದ ಸಾಮಾನೆಂದರೆ ಇದೇ. ಇಷ್ಟು ದೊಡ್ಡ ಭಾಗ ಬೇರೊಂದಿಲ್ಲ. ಹಿಂದೀ ಗಿರಣಿಗಳ ಬಟ್ಟೆಯೂ ಕೈನೂಲು ಕೈಮಗ್ಗದ ಅರಿವೆಯೂ ಪರದೇಶೀ ಬಟ್ಟೆಯನ್ನು ಎಷ್ಟೋ ಮಟ್ಟಿಗೆ ಕಡಮೆಮಾಡಿವೆ. ಆದರೂ ಸಾಲದು. ನಮ್ಮ ನಾಡಿಗೆ ಒಂದು ಗಜವಾದರೂ ಪರದೇಶೀ ಬಟ್ಟೆ ಬರುವ ಕಾರಣವೇನಿದೆ? ಅದರಲ್ಲೂ ಸಣ್ಣ ಹತ್ತಿಯಿಂದ ಮಾಡಬಹುದಾದ (ಮೈಣಗಪಟ) 'ವಾಟರ್‌ಪ್ರೂಫ್' ಬಟ್ಟೆ, ಕಾಲುಚೀಲ, ಕೈವಸ್ತ್ರ, ಹೊಲಿಗೆದಾರ ಇತ್ಯಾದಿ ಏಕೆ ತರಿಸಬೇಕು?

ನಮ್ಮ ರೈತರಿಗೆ ವರ್ಷದಲ್ಲಿ ನಾಲ್ಕು ತಿಂಗಳು ನಿರುದ್ಯೋಗ. ಹೊಲದಲ್ಲಿ ಕೆಲಸವಿಲ್ಲದ ಕಾಲದಲ್ಲಿ ಅವರಿಗೇನಾದರೂ ನಾಲ್ಕುಕಾಸು ಬರುವ ಉದ್ಯೋಗವೆಂದರೆ ನೂಲುವುದು ನೇಯುವುದು, ಯಾವ ಕಸಬಿಗೂ ಕಡಮೆಯಲ್ಲ.

ನಮ್ಮ ರೈತರ ಮನೆಗಳಲ್ಲಿ ಒಂದು ರಾಟೆಯೂ ಮಗ್ಗವೂ ಇದ್ದರೆ, ಅವರ ಮನೆ ಹೆಂಗಸರೂ ಹರೆಯದ ಮಕ್ಕಳೂ ಅವರೂ ಕೆಲಸವಿಲ್ಲದಾಗ ಅವುಗಳ



ಮೇಲೆ ಕೆಲಸಮಾಡಿದರೆ ಈಗ ಪರದೇಶೀಬಟ್ಟೆ ಕೊಳ್ಳುವ ನಮ್ಮ ಜನಕ್ಕೆಲ್ಲ ಬೇಕಾಗುವಷ್ಟು ಬಟ್ಟೆಯನ್ನು ಮಾರಬಹುದು.

ಚೆನ್ನಾಗಿದೆ. ಒಳ್ಳೆ ಏರ್ಪಾಡು ಅನ್ನುತ್ತೀರಲ್ಲವೆ. ಆದರೆ ಇಲ್ಲಿ ನೋಡಿ. ಇಂಗ್ಲೆಂಡ್ ಜಪಾನುಗಳಿಂದ ನಾವು ಅವರ ಬಟ್ಟೆ ಕೊಳ್ಳದಿದ್ದರೆ ಅವರೇಕೆ ನಮ್ಮ ಹತ್ತಿ ಕೊಂಡಾರು ?

ಒಳ್ಳೇ ಪ್ರಶ್ನೆ ; ಆದರೆ ಏನೂ ಚಿಂತೆಯಿಲ್ಲ. ನಾವು ಈಗ ಮಾರಿ ಕಳಿಸುತ್ತಿರುವ ಎಷ್ಟೋ ಹತ್ತಿ ರಾಟೆಯ ನೂಲಿಗೆ ಬರುತ್ತದೆ.

ಒಂದುವೇಳೆ ಯಾವ ಪರದೇಶವೂ ನಮ್ಮ ಹತ್ತಿಕೊಳ್ಳದೆ ಹೋದರೆ ನಮ್ಮ ಕೈಯಲ್ಲಿ ಸ್ವಲ್ಪ ಹತ್ತಿ ಉಳಿದುಬಿಡುತ್ತದೆಯಲ್ಲ. ಅದನ್ನೇನು ಮಾಡಬೇಕು ? ಬಹಳ ಸುಲಭವಾದ ಪ್ರಶ್ನೆ !

ಮಹಾತ್ಮಾ ಗಾಂಧಿಯನ್ನು ನೋಡಿಲ್ಲವೆ. ನಮ್ಮ ದೇಶದಲ್ಲಿ ಅನೇಕ ಜನ ಅವರ ಹಾಗೆ ಏಕೆ ಬಟ್ಟೆಯುಡುತ್ತಾರೆ ಗೊತ್ತಿದೆಯೆ ? ಎಂದಾದರೂ ಯೋಚಿಸಿದೀರಾ ? ಅದರ ಕಾರಣ ಹೀಗೆ. ಹಿಂದುಸ್ಥಾನದಲ್ಲಿ ನಾವು ಉಪಯೋಗಿಸುವ ಬಟ್ಟೆ ವರ್ಷಕ್ಕೆ ತಲಾ 16½ ಗಜದಷ್ಟು ಮಾತ್ರವೇ. ಇದರಲ್ಲಿ ಹೆಂಗಸರ ಸೀರೆ ಕೊಂಚ ಉದ್ದವಾದುದರಿಂದ ಗಂಡಸರ ಪಾಲಿಗುಳಿಯುವ ಬಟ್ಟೆ ಬಹಳ ಕಡಮೆ. ಹಿಂದುಸ್ಥಾನದಲ್ಲಿ ಹರಕು ಚಿಂದಿ ತೊಡುವವರೇ ಹೆಚ್ಚು. ಚಳಿ ಸೀಮೆಗಳಲ್ಲಿಯೂ ಬಟ್ಟೆ ಕೊಳ್ಳಲು ಕೈಯಲ್ಲಿ ಕಾಸಿಲ್ಲದೆ ಚಳಿಗಾಲದಲ್ಲಿ ಜನ ನಡುಗುತಿರುತ್ತಾರೆ.

ನಮ್ಮ ರೈತನಿಗೆ ಇನ್ನೂ ನಾಲ್ಕು ಹಣ ಕೈಯಲ್ಲಿದ್ದಿದ್ದರೆ—ನಾಲ್ಕು ಹಣ ಗಳಿಸಿಕೊಳ್ಳುವುದು ಎಷ್ಟು ಸುಲಭವೋ ನಿಮಗಾಗಲೆ ಗೊತ್ತಾಗಿದೆ—ಇನ್ನೂ ನಾಲ್ಕು ಬಟ್ಟೆ ಹೆಚ್ಚಿಗೆ ಕೊಳ್ಳುವಹಾಗಿದ್ದರೆ, ಹೋಗಲಿ ವರ್ಷಕ್ಕೆ ಇನ್ನೊಂದೇ ಪಂಚೆ ಅವನಿಗೆ, ಅವನ ಹೆಂಡತಿಗೆ ಇನ್ನೊಂದು ಸೀರೆಯಾದರೂ ಕೊಳ್ಳುವ ಹಾಗಾದರೆ, ಹಿಂದುಸ್ಥಾನದ ಗಿರಣಿಗಳೆಲ್ಲ ಹಗಲೂ ರಾತ್ರಿ ಸಹ ನಡೆದಾವು, ರಾಟೆಗಳೆಲ್ಲ ಕಿರುಗುಟ್ಟಿಯಾವು. ಇದ್ದ ಹತ್ತಿಯೆಲ್ಲ ಬಳಸಿಕೊಂಡಾರು. ಅಲ್ಲವೆ ?

ಬರೀ ಬಟ್ಟೆಗಷ್ಟೇ ಅಲ್ಲ ಹತ್ತಿಯ ಉಪಯೋಗ. ಹತ್ತಿ ಹೆಚ್ಚಾದರೆ ಅನೇಕ ರೀತಿಗಳಲ್ಲಿ ಉಪಯೋಗಮಾಡಬಹುದು. ಎಷ್ಟೋ ಹಾದಿ ಹುಡುಕಿದಾರೆ


ಸಣ್ಣ ತೊಳೆ ಹತ್ತಿ




ರಸ್ತೆಯ ಕೆಳಗೆ


ಮೋಟಾರು
ಟೈರಿಗೆ
ಒಳಪಟ್ಟಿ




ಡೇರೆ




ಗೋಣಿಚೀಲ




ಕಾಲುಚೀಲ ಕೈವಸ್ತ್ರ

ಜಗತ್ತಿನಲ್ಲಿ. ಇನ್ನೂ ಹುಡುಕಬಹುದು. ಮೋಟಾರು ಟೈರಿನ ಅಟ್ಟೆಗಾಗಿ ಬಳಸಬಹುದು. ನಮ್ಮ ಹೆದ್ದಾರಿಗಳ ಮೇಲ್ಮಣ್ಣಿನ ಕೆಳಗೆ ಎಷ್ಟೋ ಪದರ ಪದರ ಬೇರೆ ಪದಾರ್ಥಗಳಿವೆ. ಅಲ್ಲಿ ಹತ್ತಿಯನ್ನೂ ಬಳಸಬಹುದು.

'ವಾಟರ್‌ಪ್ರೂಫ್ ಕ್ಯಾನವಾಸನ್ನು' ಇಲ್ಲಿಯವರೆಗೆ 'ಫ್ಲ್ಯಾಕ್ಸ್' ನಾರಿನಿಂದ ಮಾಡುತ್ತಿದ್ದೇವೆ. 1939 ರಲ್ಲಿ ಯುದ್ಧ ಪ್ರಾರಂಭವಾದಾಗ ಆ ನಾರು ಸಿಗದ ಹಾಗಾದಕೂಡಲೇ ಅದರ ಬದಲು ಬೇರೆ ಪದಾರ್ಥವನ್ನು ಹುಡುಕಬೇಕಾಯಿತು. ಹಿಂದುಸ್ಥಾನದ ಹತ್ತಿ ಅದಕ್ಕನುಕೂಲವೆಂದು ಗೊತ್ತಾಯಿತು. ಇಂಗ್ಲೆಂಡೀಗ ನಮಗೆ 46 ಲಕ್ಷ ರೂಪಾಯಿನ ಹತ್ತಿ 'ಕ್ಯಾನವಾಸಿಗೆ' ಗಿರಾಕಿ ಕೊಟ್ಟಿದೆ. ಸಾವಿರಾರು ಗಜ ಆ ಪದಾರ್ಥವಿನ್ನು ತಯಾರಾಗಬೇಕು. ಗೋಣೀಚೀಲಕ್ಕೂ ಅರಳೆಗಂಟಿನ ಬಟ್ಟಾರದ ತಟ್ಟಿಗೂ ಸಣಬಿನಿಂದಾಗುವ ಇತರ ಪದಾರ್ಥಕ್ಕೂ ಸಣಬಿನೊಡನೆ ಹತ್ತಿಯನ್ನೂ ಬೆರೆಸಲು ಬಂದೀತೋ ಎಂಬ ಪ್ರಯೋಗ ನಡೆಯುತ್ತಾಯಿದೆ. ಇನ್ನೊಂದು ವಿಶೇಷ. ಇವೆಲ್ಲ ವಸ್ತುಗಳೂ ಸಣ್ಣ ತೊಳೆಯ ಹತ್ತಿಯಿಂದಲೇ ಆಗುತ್ತವೆ.

ಆದುದರಿಂದ ನಮ್ಮ ಹತ್ತಿಯನ್ನು ಯಾರು ಕೊಂಡಾರು ಎಂಬ ಚಿಂತೆ ಬೇಡ. ನಾವು ಬೆಳೆವ ಹತ್ತಿಯನ್ನೆಲ್ಲ ಉಪಯೋಗಿಸಲು ಸಾಕಷ್ಟು ಜನ ನಮ್ಮ ದೇಶದಲ್ಲೇ ಇದ್ದಾರೆ.

ಈಗ ನಾವು ಮಾತಾಡಿದುದರಲ್ಲಿ ಕೆಲವನ್ನೇ ಮಾಡಿದರೂ ಪರದೇಶೀ ಹತ್ತಿಗಾಗಿ ಬಟ್ಟೆಗಾಗಿ ಹಿಂದುಸ್ಥಾನದಿಂದ ಹೊರಗೆ ಹೋಗುವ ಹಣವನ್ನು ನಿಲ್ಲಿಸಬಹುದು. ವರ್ಷಕ್ಕೆ ನಾಲ್ಕು ತಿಂಗಳು ಏನೂ ಕೆಲಸಗಾಣದೆ ನಿರುದ್ಯೋಗದಲ್ಲಿ ನರಳುವ ನಮ್ಮ ಲಕ್ಷಾಂತರ ಜನ ರೈತರಿಗೆ ಕೆಲಸ ಕೊಡಬಹುದು. ಅಮೆರಿಕಾ ಯುರೋಪಿನ ಜನರಿಗಿದ್ದ ಹಾಗೆ ನಮಗೂ ಒಳ್ಳೇ ಅಂದವಾದ ಉಡಿಗೆ ತೊಡಿಗೆಯೂ ಆದೀತು. ಆಗ ಸಾಮಾನ್ಯ ಭಾರತೀಯನ ಚಿತ್ರ ಹೀಗಿದ್ದುದು ಹೀಗಾದೀತು.





ನಮ್ಮ ಉದ್ಯೋಗಗಳಲ್ಲಿ ಬಟ್ಟೆಯದು ಬಹಳ ಪುರಾತನವಾದುದು, ವಿಸ್ತಾರವಾದುದು. ಆದುದರಿಂದಲೇ ಅದರ ವಿಷಯವನ್ನು ಈ ಅಧ್ಯಾಯದಲ್ಲಿ ಚರ್ಚೆ ಮಾಡಿದೇವೆ. ಹೇಗಾದರೂ ನಮ್ಮ ಬಟ್ಟೆಯನ್ನು ನಾವು ತಯಾರುಮಾಡಿಕೊಳ್ಳಲು ಬರುವ ಅಡ್ಡಿ ಆತಂಕಗಳು ಉಳಿದ ಯಾವ ಪದಾರ್ಥವನ್ನು ತಯಾರು ಮಾಡಬೇಕಾದರೂ ಬರುವ ಅಡ್ಡಿ ಆತಂಕಗಳೇ.

ಬಟ್ಟೆಯನ್ನೇ ಮಾಡಲಿ ಬೆಂಕಿ ಕಡ್ಡಿಯನ್ನೇ ಮಾಡಲಿ, ಮೋಟಾರನ್ನು ಮಾಡಲಿ ಪೆಟ್ಟಿನ್ನು ಮಾಡಲಿ, ದೊಡ್ಡ ಕಾರಖಾನೆ ಎಂದರೆ ಐದು ಮಾತಿನ ಅನುಕೂಲ ಬೇಕು. ಮುಖ್ಯವಾಗಿ ಮಾಡಿದ ದಿನಸನ್ನು ಕೊಳ್ಳುವವರು ಬೇಕು. ಅಂದರೆ ದಿನಸಿಗೆ **ಗಿರಾಕಿ** ಬೇಕು. ಬಾಳುವೆಗೆ ಬೇಕಾದ ಪದಾರ್ಥ ಯಾವುದೂ ಇಲ್ಲದೆ ಬದುಕುತ್ತಿರುವ ವಿಶಾಲಭಾರತ ಜನಸ್ತೋಮ ಜಗತ್ತಿಗೆಲ್ಲಕ್ಕೂ ಹಿರಿದಾದ ಗಿರಾಕಿ ನಮಗೆ.

ಸರಿ. ಆ ಸನಗು ಮಾಡಲಿಕ್ಕೆ **ಕಚ್ಚಾ ಪದಾರ್ಥ** ಬೇಡವೆ. ನಮ್ಮ ನಾಡಿನಲ್ಲಿ ಎಲ್ಲ ತರದ ಪದಾರ್ಥವೂ ಇದೆ. ಸಮೃದ್ಧಿಯಾಗಿಯೇ ಇದೆ.

ಗಿರಣಿಯಲ್ಲಿ ದುಡಿಯಲು **ಕೂಲಿಕಾರರು** ಬೇಕು. ನಮ್ಮ ಹಳ್ಳಿಗಳ ಜನವಸತಿ ನೋಡಿ. ಅಲ್ಲಿರುವ ಹೆಚ್ಚಿನ ಜನವೆಲ್ಲ ಕಾರಖಾನೆ ಬಾಗಿಲು ತೆರೆದರೆ ಸಾಕು, ಓಡಿಬರಲು ಕಾದುಕೊಂಡಿದಾರೆ.

ಉದ್ಯೋಗ ಲಾಭಕರವಾಗಲು ಇನ್ನೂ ಎರಡು ಬೇಕು. ಪದಾರ್ಥವನ್ನು ವೇಗವಾಗಿಯೂ ವಿಶೇಷವಾಗಿಯೂ ಮಾಡಲಿಕ್ಕೆ **ಯಂತ್ರ** ಬೇಕು. ಅವನ್ನು ನಡೆಸಲು **ಶಕ್ತಿ** ಬೇಕು. ನಮ್ಮ ಬಟ್ಟೆ ಗಿರಣಿಗಳೆಲ್ಲ ಬಹಳಮಟ್ಟಿಗೆ ಪಶ್ಚಿಮ ಹಿಂದುಸ್ಥಾನದಲ್ಲಿವೆ. ಆ ಪ್ರದೇಶದಲ್ಲಿ ನೀರಿನಿಂದ ಅಗ್ಗವಾಗಿ ವಿದ್ಯುತ್ತನ್ನು ಉತ್ಪತ್ತಿ ಮಾಡಬಹುದು. ಆದರೆ ನಮ್ಮ ಗಿರಣಿಯಂತ್ರಗಳು ಓಬೀರಾಯನ ಕಾಲದವು, ಕೀಳು ತರಗತಿಯವು. ಅದಕ್ಕೆ ಕಾರಣವೆಂದರೆ ನಮ್ಮಲ್ಲಿ ಯಂತ್ರ ತಯಾರಾಗದು. ಯೂರೋಪಿನಿಂದಲೋ ಅಮೆರಿಕದಿಂದಲೋ ಬರಬೇಕು. ಆದುದರಿಂದ ತುಟ್ಟಿಯಾಗುತ್ತದೆ. ಹೀಗಾಗಿ ಹೊಸಹೊಸ ಯಂತ್ರ ತರಿಸದೆ ಹಳೆಯವುಗಳಿಂದಲೇ ಕೆಲಸ ಸಾಗಿಸುತ್ತೇವೆ.

ದೊಡ್ಡದೊಡ್ಡ ಗಿರಣಿಗಳಾಗದೆ ನಮ್ಮ ದೇಶದಂಥ ದೊಡ್ಡ ಖಂಡಕ್ಕೆ ಬೇಕಾದ ವಸ್ತುಗಳನ್ನು ಒದಗಿಸಲಾರೆವು; ಯಂತ್ರಬಲವಿಲ್ಲದೆ ಗಿರಣಿಗಳು ನಡೆಯುವ ಹಾಗಿಲ್ಲ. ಈ ಅವಳಿಜವಳಿ ಜಗಜಟ್ಟಿಗಳನ್ನು ಹುಡುಕಿ ಅವರನ್ನು ಹೇಗೆ ಕೆಲಸಕ್ಕೆ ಹಚ್ಚಬೇಕೋ ನೋಡೋಣ ನಡೆಯಿರಿ. ಈ ಪ್ರವಾಸ ನಿಮಗೊಳ್ಳೆ ಹುರುಪು ಕೊಟ್ಟೀತು. ನೀವೆಂದೂ ಕಾಣದಂಥ ತಾವಿಗೆ ನಾವು ಹೋಗಬೇಕು—ಭೂಗರ್ಭದೊಳಕ್ಕೆ.

# IX

# ನಮ್ಮ ಖನಿಜ ಸಂಪತ್ತು

ಈಗಿನ ಕಾಲದಲ್ಲಿ ಜನರು ತಮ್ಮ ಒಡವೆ ವಸ್ತು ಎಲ್ಲವನ್ನು ಕಬ್ಬಿಣದ ಪೆಟ್ಟಿಗೆಗಳಲ್ಲೋ ಬ್ಯಾಂಕಿನ ಭದ್ರಗೃಹಗಳಲ್ಲೋ ಜೋಪಾನಮಾಡುತ್ತಾರೆ. ಬ್ಯಾಂಕೂ ಭದ್ರಗೃಹವೂ ಬರುವ ಮೊದಲು ಏನಾದರೂ ಸುರಕ್ಷಿತವಾಗಿ ತೆಗೆದಿಡಬೇಕಾದರೆ ಹಳೆಯ ಕಾಲದ ಜನರು ನೆಲವನ್ನಗೆದು ಯಾರೂ ನೋಡ ದಿದ್ದಾಗ ಅದನ್ನು ಹೂತಿಡುತ್ತಿದ್ದರು. ತಮಗೆ ಬೇಕಾದಾಗ ನೆಲ ತೋಡಿ ತೆಗೆದುಕೊಳ್ಳುತ್ತಿದ್ದರು.

ಪ್ರಕೃತಿಯೂ ಹೀಗೆಯೆ ಮಾಡುತ್ತದೆ. ಮನುಷ್ಯ ತನಗೆ ಗೊತ್ತಿಲ್ಲದೆಯೆ ಎಷ್ಟೋ ರೀತಿಯಲ್ಲಿ ಪ್ರಕೃತಿಯನ್ನನುಸರಿಸುತ್ತಾನೆ. ಅವುಗಳಲ್ಲಿ ಇದೂ ಒಂದು. ಭೂಮಿಯ ಮೇಲೆ ಮನುಷ್ಯಾವತಾರವಾಗುವ ಮೊದಲೆ ಪ್ರಕೃತಿ ತನ್ನ ಆಸ್ತಿ ಯಲ್ಲಿ ಬಹಳ ಭಾಗವನ್ನು ನೆಲದೊಳಗೆ ಹೂಳಿ ಬಚ್ಚಿಟ್ಟಿದ್ದಿತು. ಸಾವಿರಾರು ವರ್ಷ ಕಳೆದ ಮೇಲೆ ತನ್ನ ಜೊತೆಯ ಪಶುಪ್ರಾಣಿಗಳಿಗಿಂತ ಮೇಲಾಗಬೇಕೆಂದು ಮನುಷ್ಯ ಪ್ರಯತ್ನ ಮಾಡಿದಾಗ ಆ ಅಜ್ಞಾನದ ತೊಳಲಾಟದಲ್ಲಿ ಅಷ್ಟಿತಷ್ಟಿ, ಆಗೊಮ್ಮೆ ಈಗೊಮ್ಮೆ, ಈ ಗುಪ್ತ ನಿಕ್ಷೇಪಗಳು ಗೋಚರವಾದವು. ಅದನ್ನು ಮೊದಲು ನೋಡಿದಾಗ ಇವನಿಗೆ ಅಚ್ಚರಿಯೋ ಅಚ್ಚರಿ. ರೋಮಾಂಚವಾಗಿ ಏನೂ ತೋರದಾಯಿತು. ಆದರೆ ಕ್ರಮೇಣ ಅದನ್ನು ಉಪಯೋಗಮಾಡಿ ಕೊಳ್ಳುವ ವಿಧಾನಗಳನ್ನು ಕಂಡುಹಿಡಿದ. ಅಂದವಾಗಿ ಹೊಳೆಹೊಳೆವ ಬಂಗಾರ ವಜ್ರ ಯಾವುದು, ಮಬ್ಬಾಗಿ ಕಡಕಾದ ಕಬ್ಬಿಣ ಕಲ್ಲಿದ್ದಲು ಯಾವುದು, ನೀರಿನಂಥ ' ಪೆಟ್ರೋಲಿಯಂ ' ಯಾವುದು ಎಲ್ಲವನ್ನೂ ಅರಿತುಕೊಂಡ.

ಈ ಪದಾರ್ಥ ಪ್ರಾಣಿಯೂ ಅಲ್ಲ ಸಸ್ಯವೂ ಅಲ್ಲ. ಇದು **ಖನಿಜ**.

ಭೂಗರ್ಭದಲ್ಲಿ ಇದು ಇರುವ ಸ್ಥಳಕ್ಕೆ **ಗಣಿ** ಎನ್ನುತ್ತಾರೆ. ನಮಗೆ ಇವು ಬಹಳ ಮುಖ್ಯ. ಈ ಖನಿಜಗಳಿಂದಲೇ ಯಂತ್ರ ತಯಾರಾಗುವುದು, ಶಕ್ತಿ ಹುಟ್ಟುವುದು.

ತನ್ನೀ ವರವನ್ನು ಪ್ರಕೃತಿ ಎಲ್ಲ ಕಡೆಯಲ್ಲೂ ಸಮವಾಗಿ ಪ್ರಸಾದಿಸಿಲ್ಲ. ಪೃಥ್ವಿಯ ಕೆಲವು ಭಾಗದಲ್ಲಿ ನೆಲೆಸಿರುವ ಜನಕ್ಕೆ ಇಂಥ ಅದ್ಭುತ ನಿಕ್ಷೇಪ ಸಿಕ್ಕಿವೆ. ಅದೇ ಬೇರೆ ಕೆಲವೆಡೆ ನೆಲವನ್ನು ಎಷ್ಟು ಅಗೆದು ತೋಡಿದರೂ ಎಲ್ಲಾ ವ್ಯರ್ಥವೇ.

ನಾವು ನೆಲೆಯಾಗಿರುವ ನೆಲವೆಂಥದು? ಕೆಟ್ಟದ್ದೇನಲ್ಲವೆನ್ನಬೇಕು. ಕಲ್ಲಿದ್ದಲು ಕಬ್ಬಿಣ ಮುಂತಾದ ಖನಿಜಗಳಿಂದ ನಮಗೆ ವರ್ಷಕ್ಕೆ 28 ಕೋಟಿ ರೂಪಾಯಿ ಸಿಗುತ್ತದೆ. 305,000 ಜನ ಅದರಿಂದ ಬದುಕುತ್ತಿದ್ದಾರೆ. ಇದೇನು ದೊಡ್ಡ ವಿಷಯ ವಲ್ಲ. ನಾವು ಮಾಡಬೇಕಾದುದರ ಮುಂದೆ ಇದು ಏನೂ ಅಲ್ಲ. ಏಕೆಂದರೆ ನಮ್ಮ ನಿಧಿನಿಕ್ಷೇಪ ಸಂಗ್ರಹ ಯಾವ ಪ್ರಮುಖ ಔದ್ಯೋಗಿಕ ದೇಶಕ್ಕೂ ಕಡಮೆಯಲ್ಲ. ಒಳ್ಳೇ ಬಲವಾದ ನಿಕ್ಷೇಪದಾಸ್ತಿಯ ಮೇಲೆ ನಾವು ಕಾಲಿಟ್ಟಿದೇವೆ. ಅದನ್ನು ಸ್ವಲ್ಪ ಪರೀಕ್ಷಿಸಿ ನೋಡೋಣವೆ?




ನಮ್ಮ ಗೆಳೆಯ ಕಲ್ಲಿದ್ದಲನ್ನು ಮೊದಲು ತೆಗೆದುಕೊಳ್ಳೋಣ. ಕಲ್ಲಿದ್ದಲುಗಣಿಗೆ ಸಮಾಧಿಯೆಂತಲೂ ಹೇಳುವುದುಂಟು. ಸಮಾಧಿಗಳಲ್ಲಿ ಸತ್ತವರನ್ನು ಹೂಳುತ್ತಾರೆ. ಗಣಿಗಳಲ್ಲೋ?

ಕಲ್ಲಿದ್ದಲಲ್ಲ ಗಣಿಗಳಲ್ಲಿ ಹೂತದ್ದು. ಈಗ ನಮಗೆ ಸಿಗುವ ವಸ್ತು ಕಲ್ಲಿದ್ದಲೇ. ಆದರೂ ಸಾವಿರಾರು ವರ್ಷದ ಕೆಳಗೆ ಹೂತುಹೋದವು ಹುಲ್ಲು ಆಪು, ನಾನಾ ಬಗೆಯ ಗಿಡ—ಕೆಲವುಸಲ ಕಾಡಿಗೆ ಕಾಡೇ ಮುಚ್ಚಿಹೋಗುತ್ತಿದ್ದವು. ಅವೆಲ್ಲ ಕಲ್ಲು ಮಣ್ಣು ಮರಳಿನ ಪದರಗಳ ನಡುವೆ ಸಿಕ್ಕಿ, ಕೊಳೆ

ಕೊಳೆತು ಕಪ್ಪಾಗಿ ಕಪ್ಪಾಗಿ, ಕಾಲಕಾಲಕ್ಕೆ ಗಟ್ಟಿಯಾಗುತ್ತ ಗಟ್ಟಿಯಾಗುತ್ತ ನಮ್ಮ ಕಣ್ಣಿಗೆ ಬೀಳುವ ಹೊತ್ತಿಗೆ ಕಲ್ಲಿದ್ದಲೆನಿಸಿಕೊಂಡಿತು.

ಕಲ್ಲಿದ್ದಲನ್ನು ಕರಿವಜ್ರವೆಂದೂ ಕರೆಯುವುದುಂಟು. ವಜ್ರದಂಥ ಬೆಲೆ ಬಾಳುವ ವಸ್ತುವಿನೊಡನೆ ಇದನ್ನೇಕೆ ಹೋಲಿಸಬೇಕೋ? ನೋಡಲಿಕ್ಕೆ ಎರಡರ ನಡುವೆ ಎಷ್ಟು ಭೇದ. ಆದರೂ ಎರಡರಲ್ಲೂ ಇರುವುದು ಇಂಗಾಲವೇ.




ಕಲ್ಲಿದ್ದಲಿನ ಯೋಗ್ಯತೆ ತಿಳಿಯಲಿ ಎಂಬುದೂ ಒಂದು ಕಾರಣವಿರಬೇಕು. ನಿಜವಾಗಿ ವಜ್ರಕ್ಕಿಂತ ಕಲ್ಲಿದ್ದಲಿನ ಯೋಗ್ಯತೆಯೇ ದೊಡ್ಡದು, ಅದರಿಂದ ಒಂದಲ್ಲ ಸಾವಿರ ಉಪಯೋಗವಿದೆ.

ಬೆಂಕಿ ಬೆಳಕು ಕೊಡುವ ಉರುವಲಿನಂತೆ ಕಲ್ಲಿದ್ದಲು ತನ್ನ ಚರಿತ್ರೆಯನ್ನು ಪ್ರಾರಂಭ ಮಾಡಿತು. ಸೌದೆಗಿಂತಲೂ ಉತ್ತಮವೆನಿಸಿಕೊಂಡಿತು. ತರುವಾಯ 'ಗ್ಯಾಸೂ' ವಿದ್ಯುತ್ತೂ ಬಂದು ಅಡಿಗೆಯೊಲೆಯಿಂದ ಕಲ್ಲಿದ್ದಲನ್ನು ಓಡಿಸಿದವು. ಅಷ್ಟು ಹೊತ್ತಿಗೆ ಅದಕ್ಕೆ ಬೇರೆ ಎರಡು ಮುಖ್ಯ ಕೆಲಸ ಸಿಕ್ಕವು; ವಿದ್ಯುತ್ತಿನ ತಯಾರಿ, ಉಗಿಯ ಉತ್ಪತ್ತಿ; ಇವೇ ಈಗ ಕಲ್ಲಿದ್ದಲಿನ ಮುಖ್ಯ ಕರ್ತವ್ಯಗಳು. ಇನ್ನು ಕೆಲವು ವರ್ಷಗಳಲ್ಲಿ ಮತ್ತಾವ ಕೆಲಸಕ್ಕೆ ಬಳಸಲ್ಪಡುತ್ತದೆಯೋ ಯಾರು ಹೇಳಬಲ್ಲರು!

ಕಲ್ಲಿದ್ದಲಿಂದ ತಾರೆಣ್ಣೆ ಮುಂತಾದ ವಸ್ತುಗಳು ತಯಾರಾಗುತ್ತವೆಯೆಂದು ಈಚೆಗೆ ಗೊತ್ತಾಗಿದೆ. ಬಣ್ಣ, ಔಷಧ ಮತ್ತು ರಾಸಾಯನಿಕ ವಸ್ತುಗಳನ್ನು ಮಾಡಲು ಆ ವಸ್ತುಗಳು ಅಗತ್ಯವಾಗಿ ಬೇಕು. ಪರದೇಶದಿಂದ ಬಣ್ಣ ಔಷಧಿಗಳನ್ನು ಪ್ರತಿ ವರ್ಷವೂ 4 ಕೋಟಿಯಷ್ಟು ತರಿಸುತ್ತಿದ್ದೇವೆ. ಇವನ್ನೆಲ್ಲ

ಮಾಡುವುದು ತಾರೆಣ್ಣೆಯಿಂದ. ಆ ತಾರೆಣ್ಣೆ ನಮ್ಮ ಬಂಗಾಲದಲ್ಲಿ ಬಿಹಾರಿನಲ್ಲಿ ಬೇಕಾದ ಹಾಗೆ ತಯಾರಾಗುತ್ತದೆ. ಅದನ್ನೆಲ್ಲ ಬಹುಭಾಗ ನಾವು ವ್ಯರ್ಥವಾಗಿ ಬಿಸಾಡುತ್ತೇವೆ. ಝರಿಯಾ ಇದ್ದಲು ಗಣಿಗಳಲ್ಲಿ ಪ್ರತಿವರ್ಷವೂ 3 ಕೋಟಿ ಗ್ಯಾಲನ್ ತಾರೆಣ್ಣೆ (ಕೋಲ್‌ಟಾರ್) ವ್ಯರ್ಥವಾಗಿ ಹೋಗುತಿದೆಯಂತೆ. ಅದರಲ್ಲಿ 'ಮೋಟಾರ್ ಸ್ಪಿರಿಟ್' ಮತ್ತು ಬೇರೆ ತೈಲಾಂಶ ಯಥೇಷ್ಟವಾಗಿದೆ. ಅದೆಲ್ಲ ವ್ಯರ್ಥವೇ !

ರಾಸಾಯನಿಕ ವಸ್ತುಗಳೂ ಬಣ್ಣದ ಪದಾರ್ಥಗಳೂ ಶಾಂತಿ ಸಮಾಧಾನದ ಕಾಲದಲ್ಲಿ ಎಷ್ಟು ಅಗತ್ಯವೋ ಯುದ್ಧಕಾಲದಲ್ಲೂ ಅಷ್ಟೇ ಅಗತ್ಯ. 1914 ರಲ್ಲಿ ಯುದ್ಧ ಪ್ರಾರಂಭವಾದಾಗ ಇಂಗ್ಲೆಂಡು ಬಳಸಿದ ಬಣ್ಣ 90% ಜರ್ಮನಿಯವು. ಅಂಥ ಮುಖ್ಯ ವಸ್ತುವಿಗಾಗಿ ಪರಾಧೀನರಾಗಿರುವುದು ಎಂಥ ಮೂರ್ಖತನವೆಂಬುದು ಆ ಯುದ್ಧದಲ್ಲಿ ಅವರಿಗೆ ಅನುಭವವಾಯಿತು. ಅದೇ 1939 ರ ಯುದ್ಧ ಮೊದಲಾದಾಗ ಕೇವಲ ಹತ್ತೇ ಪ್ರತಿಶತಿ ಬಣ್ಣದ ಪದಾರ್ಥಗಳನ್ನು ಹೊರಗಿನಿಂದ ತರಿಸಿ ಇಂಗ್ಲೆಂಡು ಉಳಿದ 90% ತಾನೇ ತಯಾರು ಮಾಡಿಕೊಳ್ಳುತ್ತಿದೆ. ಈ ಅಲ್ಪಕಾಲದಲ್ಲೇ ಅವರಿಗೆ ಸಾಧ್ಯವಾದುದು ನಮಗೆ ಮಾತ್ರ ಆಗಲಾರದೇ ? ನಾವೂ ಬೇಗ ಬೇಗ ಹಾಗೆ ಮಾಡಬೇಕು. ನಮ್ಮ ದೇಶದಲ್ಲಿ ಎಷ್ಟು ರೋಗರುಜಿನವಿದೆ; ನಮಗೆ ಔಷಧ ಬೇಡವೆ ? ನಮ್ಮಲ್ಲಿ ಎಷ್ಟು ಬಟ್ಟೆ ತಯಾರಾಗುತ್ತಿದೆ; ಅದಕ್ಕೆ ಬಣ್ಣ ಬೇಡವೆ ? ಕಲ್ಲಿದ್ದಲು



ಇವೆರಡಕ್ಕೂ ಬಹಳ ಅಗತ್ಯ. ಅಂಥದನ್ನು ರೇಲವೆ ಎಂಜಿನಿಗೆ ಅಡಿಗೆಯೊಲೆಗೆ ಹಾಕಿ ಉರಿಸಿ ವ್ಯರ್ಥಮಾಡುವುದುಂಟೆ ಅನ್ನುವವರೂ ಇದಾರೆ.

ಇಷ್ಟು ಮುಖ್ಯವಾದ ಖನಿಜ ನಮ್ಮಲ್ಲಿ ಎಷ್ಟಿದೆ ಗೊತ್ತೆ? ಈ ಶತಮಾನದ ಆದಿಯಿಂದ ನಮ್ಮ ದೇಶ ಇದ್ದಲು ಉತ್ಪತ್ತಿಯಲ್ಲಿ ಬಹಳ ಮುಂದರಿದಿದೆ, ಮುಖ್ಯವಾಗುತ್ತ ಬಂದಿದೆ. ಈಗ ಜಗತ್ತಿನಲ್ಲಿ ನಮ್ಮ ದೇಶದ್ದು ಒಂಭತ್ತನೆಯ ಸ್ಥಾನ. 1,62,000 ಮಂದಿ 2 ಕೋಟಿ 8 ಲಕ್ಷ ಟನ್ ಇದ್ದಲನ್ನು ವರ್ಷ ವರ್ಷವೂ ತೋಡುತ್ತಿದಾರೆ. ಇದರಲ್ಲಿ ಪ್ರತಿಶತಿ 90 ರಷ್ಟು ಬಂಗಾಲ ಬಿಹಾರಿನ ಇದ್ದಲು ಗಣಿಗಳಿಂದಲೇ ಬರುತ್ತದೆ. ಭೂಗರ್ಭನಿಧಿಗಳ ವಿಷಯದಲ್ಲಿ ಒಳ್ಳೇ ಅದೃಷ್ಟ ಈ ಪ್ರಾಂತಗಳದು.

ಆದರೆ ನಮ್ಮ ಗಣಿಗಳಲ್ಲಿರುವ ಇದ್ದಲಿನ ಸಂಗ್ರಹದಲ್ಲಿ ಈಗ ನಾವು ತೆಗೆಯುತ್ತಿರುವುದು ಲೆಕ್ಕಕ್ಕೇ ಬಾರದು. ಗುಡ್ಡದಲ್ಲಿ ಹರಳು ಆರಿಸಿಕೊಂಡಂತೆ.




ವಿಂಧ್ಯಾವಳಿ ಸಹ್ಯಾದ್ರಿಗಳ ಅಡಿಯಲ್ಲಿ ತುಂಬಾ ಇದ್ದಲಿದೆಯಂತೆ. ಉತ್ತರದ ಕೊನೆಯಲ್ಲಿ ಕಾಶ್ಮೀರದಲ್ಲಿ ಮೊನ್ನೆ ಮೊನ್ನೆ ಇದ್ದಲು ಕಂಡುಬಂದಿದೆ. ನಮ್ಮ ದೇಶದಲ್ಲಿ 6000 ಕೋಟಿ ಟನ್ ಇದ್ದಲು, ಸಾಧಾರಣವಾಗಿ ಉತ್ತಮತರದ್ದು ಇದೆಯೆನ್ನುತ್ತಾರೆ. ಈಗ ನಾವು ತೋಡಿಕೊಳ್ಳುತ್ತಿರುವ ಲೆಕ್ಕದ ಪ್ರಕಾರ 2000 ವರ್ಷ ತೋಡುತ್ತಾ ಹೋಗಬಹುದು !

ಇದ್ದಲಿನ ಹಾಗೇ ನೆಲದಲ್ಲಿ ಹೊರಡುವ ಇತರ ಅದುರುಗಳೂ ಮುಖ್ಯವೇ.

ಲೋಹಾಂಶ ಹೆಚ್ಚಾಗಿದ್ದರೆ ಆ ಖನಿಜಕ್ಕೆ ಅದುರು ಅನ್ನುತ್ತಾರೆ. ಅದುರನ್ನು ಕಾಸಿ ಕರಗಿಸಿ ಅದರಿಂದ ಲೋಹವನ್ನು ಬೇರೆಮಾಡುತ್ತಾರೆ. ಬೇರೆ ಬೇರೆ ಅದುರುಗಳಲ್ಲಿ ಬೇರೆ ಬೇರೆ ಲೋಹಗಳಿವೆ. ಕಬ್ಬಿಣ 'ಮ್ಯಾಂಗನೀಸ್' 'ಕ್ರೋಮೈಟ್' ಮುಂತಾದ ಲೋಹಗಳಿದ್ದರೆಯೆ ಯಂತ್ರಗಳು.

ಎಲ್ಲಕ್ಕಿಂತ ಹೆಚ್ಚಾಗಿ ನಾವು ತಲೆತುರಿಸಬೇಕಾದ ಅದುರು ಕಬ್ಬಿಣದ್ದು. ಅದರಿಂದ ಕಬ್ಬಿಣ, ಕಬ್ಬಿಣದಿಂದ ಉಕ್ಕು ಆಗುತ್ತವೆ. ಈ ಕಬ್ಬಿಣ ಉಕ್ಕು ಗಳಿಂದ ಎಂಥೆಂಥ ಅದ್ಭುತಗಳಾಗುತ್ತವೆಯೋ ಮುಂದೆ ನೋಡುವಿರಂತೆ. ಇಷ್ಟು ಮಾತ್ರ ನೆನಪಿರಲಿ. ಸಾಕಷ್ಟು ಕಬ್ಬಿಣ ಉಕ್ಕುಗಳಿಲ್ಲದ ದೇಶ ಈಗಿನ ಕಾಲದಲ್ಲಿ ತಲೆಯೆತ್ತಿಕೊಂಡಿರಲು ಸಾಧ್ಯವೇ ಇಲ್ಲ.

ಇದ್ದಲಿನಂತೆ ಕಬ್ಬಿಣವೂ ಕೂಡ ಹಿಂದುಸ್ಥಾನದಲ್ಲಿ ಬಂಗಾಲ ಬಿಹಾರ್ ಗಳಿಂದಲೇ ಹೆಚ್ಚಾಗಿ ಬರುತ್ತದೆ. ಅದರ ಹಾಗೆಯೆ ನಮ್ಮ ನೆಲದಲ್ಲಿ ಅಡಗಿ ರುವ ಕಬ್ಬಿಣದಲ್ಲಿ ಎಲ್ಲಿಯೋ ಸ್ವಲ್ಪ ಮಾತ್ರ ನಾವು ತೆಗೆಯುತ್ತಿದೇವೆ. ಜಗತ್ತಿನ ಅತಿ ವಿಸ್ತಾರವಾದ ಕಬ್ಬಿಣದ ಸಂಗ್ರಹಗಳಲ್ಲಿ ಕೆಲವು ಉತ್ತರ ಮತ್ತು ಮಧ್ಯಹಿಂದುಸ್ಥಾನದಲ್ಲಿವೆ. ಅವುಗಳಲ್ಲಿ 300 ಕೋಟಿ ಟನ್ ಕಬ್ಬಿಣ ವಿದೆಯಂತೆ. ಮತ್ತೂ ವಿಶೇಷವೆಂದರೆ, ಬರಿವಿಸ್ತಾರವಷ್ಟೇ ಅಲ್ಲ, ಉತ್ತಮ ವರ್ಗದ್ದೂ ಹೌದು. ಇದಕ್ಕಿಂತ ಚಲೋ ಕಬ್ಬಿಣವನ್ನು ಪ್ರಕೃತಿ ಯಾವ ದೇಶಕ್ಕೂ ಕೊಟ್ಟಿಲ್ಲ.

ಅಷ್ಟು ಸಂಗ್ರಹವಿದ್ದರೂ ನಾವು ತೆಗೆದುಕೊಳ್ಳುವ ಕಬ್ಬಿಣ ಮಾತ್ರ ಬಹಳ ಸ್ವಲ್ಪ. ಇತರ ದೇಶಗಳು ನಮಗಿಂತ ಬಹಳ ಹೆಚ್ಚು ತೆಗೆಯುತ್ತವೆ. 25ನೆಯ ಪುಟದಲ್ಲಿ ಚಿತ್ರವನ್ನು ನೋಡಿ. ನಾವೇ ಜಗತ್ತಿಗೆಲ್ಲ ಮೊದಲಾಗಬಹುದಾದರೂ ಏಳನೆಯ ಹೆಜ್ಜೆಗೆ ನಿಂತಿದೇವೆ.

ಮತ್ತೊಂದು ಮುಖ್ಯಲೋಹ 'ಮ್ಯಾಂಗನೀಸ್' ಅದರ ಪ್ರಾಮುಖ್ಯತೆ ಮುಂದೆ ನಮಗೆ ತಿಳಿಯುತ್ತದೆ. 'ಸೋವಿಯೆಟ್' ರಷ್ಯಾದ ತರುವಾಯ ನಾವೇ ಜಗತ್ತಿಗೆಲ್ಲ ಮೊದಲಿಗರು 'ಮ್ಯಾಂಗನೀಸ್' ಉತ್ಪತ್ತಿಯಲ್ಲಿ. ಜಗತ್ತಿಗೆಲ್ಲ ನಮ್ಮ ಸಂಗ್ರಹವೇ **ಅತಿ** ದೊಡ್ಡದು. 1938ರಲ್ಲಿ ನಮ್ಮ 'ಮ್ಯಾಂಗನೀಸ್' ಉತ್ಪತ್ತಿ

4,92,000 ಟನ್. ಅದರಲ್ಲಿ ಅರ್ಧಕ್ಕಿಂತ ಹೆಚ್ಚು ಮಧ್ಯಪ್ರಾಂತಗಳಿಂದ ಬಂದಿತು. ಅದೇ ಪುಟದಲ್ಲಿನ ಚಿತ್ರವನ್ನು ನೋಡಿದರೆ ಜಗತ್ತಿಗೆ 'ಮ್ಯಾಂಗನೀಸ್' ಒದಗಿಸುವುದರಲ್ಲಿ ನಮ್ಮ ಭಾಗವೆಷ್ಟು ದೊಡ್ಡದೋ ತಿಳಿಯುತ್ತದೆ.

ಇದನ್ನೆಲ್ಲ ನಾವೇನು ಮಾಡುತ್ತೇವೆ? ಅದುರಿನಿಂದ 'ಮ್ಯಾಂಗನೀಸ'ನ್ನು ತೆಗೆಯುತ್ತೇವೆಯೆ? ತೆಗೆದು ಕಬ್ಬಿಣದೊಡನೆ ಅದನ್ನು ಬೆರಸಿ ಒಳ್ಳೇ ಉಕ್ಕು ಮಾಡುತ್ತೇವೆಯೆ? ಇಲ್ಲ, ಅದನ್ನು ಕುಟ್ಟಿ ನಾನಾ ಪದಾರ್ಥಗಳನ್ನು ಬೆಳ್ಳಗೆ ಮಿನುಗಿಸುವ ಪುಡಿ ಮಾಡುತ್ತೇವೆಯೆ? ಅಥವಾ ಚಲೋ ಕ್ರಿಮಿನಾಶಕ ದ್ರವ್ಯಗಳನ್ನು ಅದರಿಂದ ತಯಾರುಮಾಡುತ್ತೇವೆಯೆ? ಹೋಗಲಿ, ಗಾಜಿಗೆ ಬಣ್ಣ ಹಾಕಲು ಉಪಯೋಗಿಸುತ್ತೇವೆಯೆ? ಎಲ್ಲವನ್ನೂ ಮಾಡ**ಬಹುದು**. ಆದರೆ ನಾವು ಮಾಡುತ್ತಾ ಇಲ್ಲ. ಬೇರೆ ಯಾರಾದರೂ ಮಾಡಲೆಂದು ಬಿಟ್ಟುಬಿಡು ತ್ತೇವೆ! ನಾವು ತೋಡಿದ ಅದುರನ್ನೆಲ್ಲ ಪರದೇಶಕ್ಕೆ, ಯೂರೋಪು ಅಮೆರಿಕಾ ಜಪಾನುಗಳಿಗೆ ಕಳಿಸಿಬಿಡುತ್ತೇವೆ. ದಿನೇ ದಿನೇ ಹೆಚ್ಚು ಹೆಚ್ಚು ಕಳಿಸುತ್ತಿದ್ದೇವೆ. 1914 ರಲ್ಲಿ ಕಳಿಸಿದುದಕ್ಕಿಂತ ಈಗ ಕಳಿಸುವುದು 15 ಪಾಲು ಹೆಚ್ಚು.

ಇದೊಂದೇ ಅಲ್ಲ. ನಮ್ಮ ಅದ್ಭುತವಾದ ಭೂಗರ್ಭಸಿಧಿಯೆಲ್ಲಕ್ಕೂ ಇದೇ ಗತಿ. ಇತರ ದೇಶಗಳಿಗೆ ಬೇಡವಾದವನ್ನು ನಾವು ಉದಾಸೀನಮಾಡಿ ಹಾಗೆಯೆ ಬಿಡುತ್ತೇವೆ. ಅವರಿಗೆ ಬೇಕಾದುದನ್ನು ಅವರಿಗೇ ಮಾರಿಬಿಡುತ್ತೇವೆ. ಆ ಔದಾಸೀನ್ಯಕ್ಕಿಂತ ಇದು ಮತ್ತೂ ಕೆಟ್ಟದು. ಇಂದಲ್ಲ ನಾಳೆ ನಮಗೆ ಬುದ್ಧಿ ಬಂದು ಆ ಪದಾರ್ಥಗಳನ್ನು ಉಪಯೋಗಮಾಡಿಕೊಳ್ಳುವ ಮನಸು ಹುಟ್ಟಿದಾಗ ಅವೇ ಇರಲಿಕ್ಕಿಲ್ಲ, ಸವೆದು ಮಾಯವಾಗಿಬಿಟ್ಟಾವು! ಇಲ್ಲಿಗೂ ಸಾಲದೆ, ನಮ್ಮ ಪದಾರ್ಥಗಳನ್ನು ಸರಿಯಾದ ಬೆಲೆಗೂ ಮಾರುತ್ತಿಲ್ಲ. ಅರ್ಧ ಬೆಲೆಗೇ ಮಾರುತ್ತಿದೇವೆ! ಇದಕ್ಕಿಂತ ದಡ್ಡತನವುಂಟೆ?

ಅದುರಿನಿಂದ 'ಮ್ಯಾಂಗನೀಸ'ನ್ನು ತೆಗೆದು ಅದನ್ನು ಪರದೇಶಕ್ಕೆ ಕಳಿಸಿದರೆ ಲಂಡನ್‌ನಲ್ಲಾಗಲಿ ನ್ಯೂಯಾರ್ಕಿನಲ್ಲಾಗಲಿ ಅದಕ್ಕೊಳ್ಳೆ ಬೆಲೆ ಸಿಗುತ್ತದೆ. ಆದರೆ ನಾವು ಮಾಡುವುದು ಹಾಗಲ್ಲ. ಅದರ ಬದಲು ಅದುರನ್ನೇ ಕಳಿಸುತ್ತೇವೆ. ಇಲ್ಲಿಂದ ಅಲ್ಲಿಯ ವರೆಗೂ 'ಮ್ಯಾಂಗನೀಸಿ'ನ ಜೊತೆಗೆ ಆ ಕೆಲಸಕ್ಕೆ ಬಾರದ

ಮಣ್ಣನ್ನು ಸಾಗಿಸುವ ವೆಚ್ಚ ಕೊಡಬೇಕು ತಾನೆ! ಹಿಂದುಸ್ಥಾನದಲ್ಲೇ ಅದುರಿನಿಂದ ಲೋಹ ತೆಗೆವ ಕಾರಖಾನೆಗಳನ್ನು ಏರ್ಪಡಿಸಲು ನಮಗೆ ಸೋಮಾರಿತನ. ಈ 'ಮ್ಯಾಂಗನೀಸಿ'ನ ಹಾಗೆಯೇ ಉಳಿದ ಅದುರುಗಳ ಪಾಡು.

ನಮ್ಮಲ್ಲಿ ಯಥೇಷ್ಟವಾಗಿ ಸಿಗುವ ಮತ್ತೊಂದು ಖನಿಜ, ಕಾಗೆಬಂಗಾರ. ಯುದ್ಧದಲ್ಲಿ ಕಾಗೆಬಂಗಾರ (ಅಭ್ರಕ) ಅತ್ಯಗತ್ಯ. ವಿದ್ಯುತ್ತನ್ನು ಉರಿಸಲು, ನಮಗದರ ಹೊಡೆತ ತಾಗದಿರಲು ಇದು ಬೇಕೇಬೇಕು. ಗಾಜಿಗೆ ಬದಲಾಗಿ ಕೆಲವುವೇಳೆ ಇದನ್ನು ಪಯೋಗಿಸಬಹುದು. ಇಂಥ ಅದ್ಭುತ ವಸ್ತುವಿನ ಸಂಗ್ರಹ ನಮ್ಮಲ್ಲಿ ಸಮೃದ್ಧಿಯಾಗಿದೆ. ನಮ್ಮ ಸಂಗ್ರಹದ ಅಂಚನ್ನೂ ಕೂಡ ನಾವಿನ್ನೂ ಮುಟ್ಟಿಲ್ಲವಾದರೂ ಜಗತ್ತಿನಲ್ಲಿ ಬಳಸುವದರಲ್ಲಿ $\frac{3}{4}$ರಷ್ಟು ಭಾಗ ನಮ್ಮ ಅಭ್ರಕವೇ! ಇದೂ ಕೂಡ ಬಿಹಾರಿನಲ್ಲೇ ಸಿಗುತ್ತದೆ. ಎಲ್ಲದರಂತೆ ಇದನ್ನೂ ನಾವು ಇಂಗ್ಲೆಂಡು ಅಮೇರಿಕಾಗಳಿಗೆ ಕಳಿಹಿಸುತ್ತೇವೆ.

ಬಹಳ ಹೆಚ್ಚಾಗಿರದಿದ್ದರೂ ಸ್ವಲ್ಪ ಸ್ವಲ್ಪ ಪ್ರಮಾಣದಲ್ಲಿ ಇನ್ನೂ ಕೆಲವು ಲೋಹಗಳಿವೆ ನಮ್ಮಲ್ಲಿ. ವಿದ್ಯುತ್ತನ್ನು ನಾಡಿನಲ್ಲೆಲ್ಲ ಹರಡುವ ತಂತಿಗಳಿಗೆ ಬೇಕಾಗುವ ತಾಮ್ರ; ಬಿಸ್ಕತ್ತು ಮೊದಲಾದ ತಿಂಡಿಯ ಪದಾರ್ಥಗಳನ್ನು ಮೂಲೆಯಿಂದ ಮೂಲೆಗೆ ಸಾಗಿಸುವ ಡಬ್ಬಿಗಳ 'ಟಿನ್'; ಹಗುರಾಗಿ, ಗಟ್ಟಿಯಾಗಿ ಅಡಿಗೆ ಪಾತ್ರೆಗಳಿಗೂ ವಿದ್ಯುತ್ತಿನ ಸಲಕರಣೆಗಳಿಗೂ ವಿಮಾನಗಳಿಗೂ ಉಪಯೋಗವಾಗುವ 'ಅಲ್ಯೂಮಿನಿಯಂ'; ಉಕ್ಕಿನ ಕಾರಖಾನೆಗಳಲ್ಲಿ ಮೇಲುಹೊದಿಕೆಗಾಗಿ ಬಳಸುವ ಇಟ್ಟಿಗೆಗಳ 'ಕ್ರೋಮೈಟ್'; ನಮ್ಮ ನಾಣ್ಯಗಳ ಬೆಳ್ಳಿ ಬಂಗಾರ; ನಮ್ಮ ತೆಂಕಣ ಗಡಿಯಾದ ಕನ್ಯಾಕುಮಾರಿ ಭೂಶಿರದ ಮರಳಿನಲ್ಲಿ ಬಣ್ಣಗಳ ತಯಾರಿಗೆ ಬೇಕಾದ 'ಇಲ್ಮೆನೈಟ್' ಮತ್ತು ಬಿಜಲಿ ಬತ್ತಿ ಮಾಡಲಿಕ್ಕೆ 'ಮೊನಾಜೈಟ್' ಸಿಗುತ್ತವೆ. ನಮ್ಮ ಖನಿಜಗಳಿಂದ ಆಗುವ ಕೆಲವು ವಸ್ತುಗಳನ್ನು ಮುಂದಿನ ಚಿತ್ರದಲ್ಲಿ ನೋಡಿರಿ.

ಖನಿಜಗಳೆಂದರೆ ಎಲ್ಲಾ ಲೋಹಗಳೇ ಎಂದು ತಿಳಿಯಬೇಡಿ. ಆಗಲೇ ಹೇಳಲಿಲ್ಲವೆ ಖನಿಜಲವಣಗಳ ವಿಷಯ. ಬಿಹಾರಿನಲ್ಲಿ 'ನೈಟರ್' (ಸಾಲ್ಟ್‌ಪೀಟರ್) ಸಿಗುತ್ತದೆ. ಅದರಲ್ಲಿ 'ನೈಟ್ರೇಟ್' ವಸ್ತುಗಳಿವೆ. ಹಿಂದಿನ ಕಾಲದಲ್ಲಿ ಅದನ್ನು



ಸಿಡಿಮದ್ದು ಬಂದೂಕುಮದ್ದುಗಳಿಗಾಗಿ ಉಪಯೋಗಿಸುತ್ತಿದ್ದರು. ಈಗ ಮದ್ದಿಗೆ ಕೃತಕ 'ನೈಟ್ರೇಟ್' ಬಳಸುತ್ತಾರೆ. ಆದುದರಿಂದ 'ಸಾಲ್ಟ್‌ಪೀಟರ'ನ್ನು ಸಾರವರ್ಧಕವಾಗಿ ಬಳಸಿ ಮತ್ತೆ ನೆಲಕ್ಕೆ ಸೇರಿಸಬಹುದು. ಭೂಮಿಗೆ 'ನೈಟ್ರೊಜಿನ್' ಬೇಕೆಂಬುದನ್ನು ಮರೆಯಬೇಡಿರಿ. ನಮ್ಮ ಭೂಮಿಯಲ್ಲಿ



ಹೆಚ್ಚಾಗಿಯಲ್ಲದಿದ್ದರೂ 'ಫಾಸ್ಫೇಟ್ಸ್' ಇವೆ. ಇವು ಇನ್ನೂ ಹೆಚ್ಚಾಗಿದ್ದರೆ ಚೆನ್ನಾಗಿತ್ತು. ಏಕೆಂದರೆ ಇವು ಚಲೋ ಗೊಬ್ಬರ.

ಉದ್ಯೋಗಕ್ಕೆ ಬೀಜಕಣ-ಜೀವಕಣವಾದ 'ಆಲ್ಕಲಿ' ಲವಣಗಳನ್ನು ಮಾಡುವದರಲ್ಲಿ ನಾವು ದಿನಾ ಬಳಸುವ ಉಪ್ಪು ಬಹಳ ಮುಖ್ಯವಸ್ತು,

ಗೊತ್ತೆ? ಈ ಉಪ್ಪು ಸಮುದ್ರದಿಂದ ಎಷ್ಟು ಬೇಕಾದರೂ ನಮಗೆ ಸಿಗುತ್ತದೆ. ನಮ್ಮ ದಿನಬಳಕೆಗೆ ನಾನಾ ತರದ ಪದಾರ್ಥಗಳನ್ನು ಉಪಯೋಗಿಸುತ್ತೇವಲ್ಲ; ಕಾಗದ, ಗಾಜು, ಚರ್ಮ, ಸಾಬೂನು, ಇನ್ನೂ ಎಷ್ಟೋ. ಇವನ್ನೆಲ್ಲ ಮಾಡುವಾಗ 'ಆಲ್ಕಲಿ' ಲವಣಗಳನ್ನು ಉಪಯೋಗಿಸುತ್ತಾರೆ. 1937-8 ರಲ್ಲಿ ಒಂದು ಕೋಟಿ ರೂಪಾಯಿ ಕೊಟ್ಟು ಪರದೇಶದಿಂದ ಈ ಲವಣಗಳನ್ನು ತರಿಸಿದೆವು ನಾವು.

ಆದರೆ ಈಗ ನಾವು ನಮ್ಮ ಹೆಜ್ಜೆ ಬಹಳ ಮುಂದೆ ಹಾಕಿದೇವೆ ಈ ವಿಷಯದಲ್ಲಿ. ಬರೋಡಾ ಸಂಸ್ಥಾನದ ಮಿಠಾಪುರದಲ್ಲಿ (ಉಪ್ಪಿನ ನಗರ) ಬೇಕಾದಷ್ಟು ಉಪ್ಪು ಸುಣ್ಣಕಲ್ಲು ಸಿಗುತ್ತದೆ. ನಾಲ್ಕಾರು ತಿಂಗಳೊಳಗೇ 'ಸೋಡಾ ಆಷ್', 'ಕಾಸ್ಟಿಕ್ ಸೋಡ', 'ಬ್ಲೀಚಿಂಗ್' ಪುಡಿ ಮುಂತಾದ ಗಟ್ಟಿ ರಾಸಾಯನಿಕ ವಸ್ತುಗಳು ಅಲ್ಲಿ ಯಥೇಚ್ಛವಾಗಿ ತಯಾರಾಗುತ್ತವೆ.

'ಪೆಟ್ರೋಲಿಯಂ' ಗೊತ್ತಿಲ್ಲವೆ? ಆ ಅದ್ಭುತ ಖನಿಜತೈಲ. ಅದರ ಮಹತ್ವ ಹೇಳತೀರದು. ಆ ಯೆಣ್ಣೆಯಿರುವ ಭೂಮಿಗಳನ್ನು ವಶಮಾಡಿಕೊಳ್ಳಲಿಕ್ಕೆ ದೇಶದ ಮೇಲೆ ದೇಶ ನುಗ್ಗುತ್ತಿವೆ, ಯುದ್ಧ ಮಾಡುತ್ತಿವೆ. ನಮ್ಮಲ್ಲೂ ಕೊಂಚ ಇದೆ. ಈ ಎಣ್ಣೆ ಬರ್ಮಾದಲ್ಲಿ ಬಹಳವಿತ್ತು. ಆದರೆ ಬರ್ಮಾ ಹಿಂದುಸ್ಥಾನದಿಂದ ಬೇರೆ ಮಾಡಲ್ಪಟ್ಟಿತಲ್ಲ! ಈಗ ಅಸಾಂನಲ್ಲಿ ಎಲ್ಲೋ ಕೊಂಚವಿದೆ. ಬಲೂಚಿಸ್ಥಾನದಲ್ಲೂ ಪಂಜಾಬ್ ಮತ್ತು ವಾಯುವ್ಯಪ್ರಾಂತಗಳಲ್ಲೂ ಬೇಕಾದಷ್ಟು ಸಿಗಬಹುದೆಂದು ಹೇಳುತ್ತಾರೆ. ಪಂಜಾಬಿನ ಝೀಲಂ ಪಟ್ಟಣದ ಬಳಿ ನಿನ್ನೆ ಮೊನ್ನೆ ಎಣ್ಣೆ ಗಣಿಯೊಂದು ಕಂಡುಬಂದು ಅಲ್ಲಿ ಕೆಲಸ ಮಾಡಲಾಗಿದೆ. ಅದು ಕಾಶ್ಮೀರದ ಗಡಿಯ ವರೆಗೂ ಹರಡಿದೆಯಂತೆ. ಈ ಭಾಗದಲ್ಲೊಂದು ರೇಲು ಹಾದಿಯೂ 'ಗ್ರಾಂಡ್‌ಟ್ರಂಕ್' ಎಂಬ ಹೆದ್ದಾರಿಯೂ ಇವೆ. ಇದರಿಂದ ಹಿಂದುಸ್ಥಾನದ ಎಲ್ಲಾ ಮೂಲೆಗಳಿಗೂ ಆ ಎಣ್ಣೆ ಸಾಗಿಸಲು ಅನುಕೂಲ.

ಲೋಹದ ಕಾರಖಾನೆಗಳಿಗೂ ರಾಸಾಯನಿಕೋದ್ಯೋಗಗಳಿಗೂ ಆಧಾರವಾದ ಒಂದು ಖನಿಜವನ್ನೇ ಮರೆತೆ—ಗಂಧಕ. ಗಂಧಕದ ಉಪಯೋಗ ಅಷ್ಟಿಷ್ಟಲ್ಲ. ಅದು ಚಲೋ ಕ್ರಿಮಿನಾಶಕ. ಚರ್ಮರೋಗಗಳಿಗೆ ಒಳ್ಳೇ ಮದ್ದು; ರಬ್ಬರು ತಡತಬರುವಂತೆ ಮಾಡಲು ಇದು ಬೇಕೇಬೇಕು. ರೈತರಿಗೆ ಕ್ರಿಮಿಗಳನ್ನು

ಕೊಲ್ಲಲು ಇದು ಬೇಕು. ಕಾಗದದ ಸಾಮಾನು, ಕಟ್ಟಿಗೆಯ ಸಾಮಾನು ಬಾಳಿಕೆ ತಡತ ಬರಬೇಕಾದರೆ ಗಂಧಕದ ಸೀರಿನಲ್ಲಿ ಅದ್ದಬೇಕು. ಎಣ್ಣೆಗೆ ಗಂಧಕ ಬೆರೆಸಿದರೆ ಲೋಹ ಕತ್ತರಿಸುವ ಸಾಧನವಾಗುತ್ತದೆ. ಮನೆಕಟ್ಟುವಾಗ ಕಲ್ಲಿನಲ್ಲಿ ಲೋಹ ಕೂಡಿಸಲಿಕ್ಕೆ ಸಿಮೆಂಟಿನಲ್ಲಿ ಗಂಧಕ ಸೇರಿಸಿ ಸರಿ ಮಾಡುತ್ತಾರೆ. ಜಿತ್ತದ ಸಾಮಾನನ್ನೂ ಹುಲ್ಲಿನ ಪದಾರ್ಥಗಳನ್ನೂ ಬಿಳಿ ಬಣ್ಣಕ್ಕೆ ತಿರುಗಿಸಲು ಗಂಧಕ, ತೊಗಲು ಹದ ಮಾಡಲು ಗಂಧಕ; ರಾಸಾಯನಿಕ ವಸ್ತುಗಳಿಗಂತೂ ಅತಿ ಮುಖ್ಯವಾದುದು ಗಂಧಕ.




ಗಂಧಕದ ಮೂಲವಸ್ತು 'ಪೈರೇಟ್ಸ್'; ಇದು ಹಿಂದುಸ್ಥಾನದಲ್ಲಿ ಎಲ್ಲೆಡೆಯಲ್ಲೂ ಸಿಗುತ್ತದೆ. ಆದರೆ ನಾವಾಗಿ ಗಂಧಕದ 'ಆಸಿಡ್' ತಯಾರಿಸುವಷ್ಟು ರಾಶಿಯಾಗೇನಲ್ಲ. ಇದು ತೀರ ದುಃಖಪ್ರದವಲ್ಲವೆ? ಇಂಗ್ಲೆಂಡಿನಲ್ಲಿದನ್ನು ಅಗ್ಗವಾಗಿ ತಯಾರು ಮಾಡಿ 30 ಪೌಂಡಿನಿಂದ 2 ಕ್ಕೆ ಅದರ ಬೆಲೆ ಇಳಿಸಿ ರಾಸಾಯನಿಕೋದ್ಯೋಗಕ್ಕೆ ಗಟ್ಟಿ ತಳಹದಿ ಹಾಕಿದಾರೆ. ಬ್ರಿಟಿಷರ

ರಾಸಾಯನಿಕ ವಸ್ತುಗಳೂ ಔಷಧಗಳೂ ಹಿಂದುಸ್ಥಾನವನ್ನು ಮುತ್ತಿ ಇದ್ದ ಬಿದ್ದ ನಮ್ಮ ಪಟಿಕ, 'ನೈಟ್ರೇಟ್' ಉದ್ಯೋಗಗಳನ್ನು ನುಂಗಿದವು. ಅದರ ಫಲವಾಗಿ ನಾವು **ನಮ್ಮ ದೇಶದಲ್ಲೇ ಸಿಗುವ ಖನಿಜಗಳನ್ನು ಉಪಯೋಗ ಮಾಡದೆ ಹಾಗೇ ಬಿಟ್ಟು ಅವುಗಳಿಂದ ತಯಾರಾಗುವ** ಪದಾರ್ಥಗಳನ್ನು ಕೊಳ್ಳಲು ಪರದೇಶಗಳಿಗೆ ವರ್ಷಕ್ಕೆ ಎರಡು ಕೋಟಿ ಪೌಂಡು ಹಣವನ್ನು ತೆರುತ್ತಿದ್ದೇವೆ.

ಖನಿಜಗಳಲ್ಲಿ ನಾವು ಬಲವಾಗಿದೇವೆ. ಕಬ್ಬಿಣ, 'ಮ್ಯಾಂಗನೀಸ್', ಅಭ್ರಕಗಳಲ್ಲಿ ಜಗತ್ತಿನೊಳಗೇ ನಮ್ಮದು ಅಗ್ರಸ್ಥಾನ. 'ಪೆಟ್ರೋಲು', ಗಂಧಕ ಮಾತ್ರ ನಮ್ಮಲ್ಲಿಲ್ಲ. ಆದರೇನು? **ಎಲ್ಲವೂ** ಇರಬೇಕೆಂದರಾಗುತ್ತದೆಯೆ? ನಮಗೆ ಈಗ ಸಿಗುತ್ತಿರುವ ಗಂಧಕ, 'ಪೆಟ್ರೋಲು' ಇನ್ನೂ ಹೆಚ್ಚಾಗುವಂತೆ ಮಾಡಿಕೊಳ್ಳಬೇಕು. ಈಚೆಗೆ ಸಿಮ್ಲಾದಲ್ಲಿ, ಬಿಹಾರಿನ ಷಾಬಾದಿನಲ್ಲಿ, ಮುಂಬಯಿ ಪ್ರಾಂತದ ರತ್ನಾಗಿರಿಯಲ್ಲಿ 'ಪೈರೈಟ್' ಕಂಡುಬಂದಿದೆಯಂತೆ. ಇಲ್ಲದಿದ್ದರೆ ಮತ್ತೊಂದು; ಬಿಹಾರಿನಲ್ಲಿ ತಾಮ್ರ ತಯಾರುಮಾಡುವಲ್ಲಿ ದಿನವೂ ತಾಮ್ರದ ಅದುರನ್ನು ಸುಡುವಾಗ 2 ಕೋಟಿ ಟನ್ ಗಂಧಕಾಮ್ಲ ಗಾಳಿಗೆ ಹೋಗುತ್ತದೆ. ಇತರ ದೇಶಗಳಲ್ಲಾದರೆ ಈ ವಾಯುವನ್ನೂ ಹಾಗೇ ಬಿಡುತ್ತಾರೆಯೆ? ಇಲ್ಲ. ಕೆನಡಾ ಫಿನ್‌ಲೆಂಡ್‌ಗಳಲ್ಲಿ ಅದನ್ನು ಗಂಧಕವಾಗಿ ಮಾಡುತ್ತಾರೆ. ನಾವು ಮಾಡಬಾರದೇಕೆ?

ಇದೇ ಅಲ್ಲ. ನಮ್ಮ ನೆಲದೊಳಗೆ ಇನ್ನೂ ಏನೇನಿದೆಯೋ **ನಿಜವಾಗಿಯೂ ನಮಗೆ ಗೊತ್ತಿದೆಯೆ?** ನಮ್ಮ ಸೋಮಾರಿತನ ಎಂಥದೋ ಏನೋ, ನಮ್ಮ ಭೂಗರ್ಭಭಾಂಡಾರದಲ್ಲಿ ಏನೇನಿದೆಯೋ ನೋಡುವ ಗೋಜೇ ಇಲ್ಲವಾಗಿದೆ. ಸರಕಾರದ ಅಧಿಕಾರಿಗಳು ಕೆಲವರು ನೆಲತೋಡಿ ಒಳಗಿಳಿದು ಅಲ್ಲೇನಿದೆಯೋ ಪರೀಕ್ಷಿಸುತ್ತಾರೆ. ಅದೇ ಅವರ ಕೆಲಸ. ಒಂದೊಂದು ವರ್ಷ ಒಂದೊಂದು ಜಿಲ್ಲೆಗೆ ಹೋಗುತ್ತಾರೆ ಈ ಪರೀಕ್ಷೆಗಾಗಿ. ಆದರೆ ಇಂಥ ಅಧಿಕಾರಿಗಳು ಬಹಳಿಲ್ಲ. ಇದ್ದವರು ಮಾಡಿದ ಪರೀಕ್ಷೆಯೂ ಬಹಳ ಸ್ವಲ್ಪ. ಉಳಿದ ಕಡೆ ಏನಿದೆಯೋ ನಮಗೇನು ಗೊತ್ತು?

ಇದ್ದಕ್ಕಿದ್ದ ಹಾಗೇ 8 ಕೋಟಿ ಟನ್ ಇದ್ದಲು 61 ಕೋಟಿ ಟನ್ ಕಬ್ಬಿಣದ ಅದುರು ಅಸಾಂನಲ್ಲಿ ಸಿಕ್ಕಿತೆಂದು ಪತ್ರಿಕೆಗಳಲ್ಲೊಂದು ದಿನ ನೀವು ಓದಬಹುದು. ಇನ್ನೊಂದು ದಿನ ಬಿಹಾರಿನ ಡಾಲ್ಟನ್‌ಗಂಜಿನಲ್ಲಿ ಹೇರಳವಾಗಿ 'ಮಾಗ್ನಟೈಟ್'—ಬಹು ಮುಖ್ಯವಾದ ಅದುರು—ಸಿಕ್ಕಿತೆಂದು ಓದಬಹುದು. ಬಿಹಾರಿನವರದೇ ಅದೃಷ್ಟ! ಅಲ್ಲವೆ?





X

# ಯಂತ್ರಬಲ

ಒಂದಾನೊಂದು ಕಾಲದಲ್ಲಿ, ಮನುಷ್ಯಪ್ರಾಣಿಯು ಇನ್ನೂ ಎಳಕ ಆಗಿದ್ದಾಗ ಎಲ್ಲ ಪ್ರಾಣಿಗಳಂತೆ ತಾನೂ ಎಲ್ಲ ಕೆಲಸವನ್ನೂ ಕೈಗಳಿಂದಲೇ ಮಾಡಿಕೊಳ್ಳುತ್ತಿದ್ದ. ಬೇಗನೆ—ಅಂದರೆ ನೂರಾರು ಶತಮಾನಗಳ ಮೇಲೆ!—ಮರ ಮುಟ್ಟು ಕೊಯ್ಯಲಿಕ್ಕೆ ಒಡೆಯಲಿಕ್ಕೆ ಎತ್ತಲಿಕ್ಕೆ, ಕಲ್ಲಿನಿಂದ ಮರದಿಂದ ಲೋಹದಿಂದ, ಉಪಕರಣಗಳನ್ನು ಮಾಡಿಕೊಂಡ. ಆದರೆ ಅವನ್ನು ಬಳಸಬೇಕಾದರೆ ಮತ್ತೆ ತನ್ನ ಕೈಯೋ ಕಾಲೋ ಉಪಯೋಗಿಸಬೇಕು. ಹೀಗೆ ಕೆಲವು ಕಾಲವಾದ ಮೇಲೆ ಈ ಕೆಲಸವನ್ನೂ ಇತರ ಪ್ರಾಣಿಗಳಿಂದ ಮಾಡಿಸಿಕೊಳ್ಳಬಹುದೆಂಬುದು ಅವನಿಗೆ ತಿಳಿಯಿತು. ಒಡನೆಯೆ ಎತ್ತು ಕುದುರೆ ಆನೆ ನಾಯಿಗಳನ್ನು ಸಾಧುಮಾಡಿ ಕಷ್ಟವಾದ ಕೆಲಸವನ್ನೆಲ್ಲ ಅವುಗಳಿಂದ ಮಾಡಿಸತೊಡಗಿದ. ಮುಂದೆ, ತನ್ನ ದೋಣಿ ಹಡಗು ನಡೆಸಲು ಗಾಳಿಯ ವೇಗವನ್ನೂ ನದೀ ಪ್ರವಾಹವನ್ನೂ ಸಮುದ್ರದ ಪರಿಳಿತಗಳನ್ನೂ ಅನುಕೂಲವಾಗುವಂತೆ ಉಪಯೋಗಿಸಬಹುದೆಂದು ತಿಳಿಯಿತು. ಆದರೆ ಕಲ್ಲು ಒಡೆಯುವುದು ಮರ ಕಡಿಯುವುದು ಸಾಮಾನು ಹೊರುವುದು ಮುಂತಾದ ಅನಿಷ್ಟ ಕೆಲಸವನ್ನೆಲ್ಲ ಪ್ರಾಣಿಗಳೋ ಜೀತಗಾರರೋ ಮಾಡುತ್ತಿದ್ದರು. ಸಾವಿರಾರು ವರ್ಷ ಹೀಗೆ ಕಳೆಯಿತು.

ಮೊನ್ನೆ ಮೊನ್ನೆಯ ವರೆಗೂ ಹಿಂದುಸ್ಥಾನದಲ್ಲಿ ಮನೆಕಟ್ಟುವುದು,

ದೋಣಿಗೆ ಹುಟ್ಟುಹಾಕುವುದು, ಸಾಮಾನು ಹೊರುವುದು ಎಲ್ಲಾ, ಹಿಂದೆ ಓಬೀರಾಯನ ಕಾಲದಲ್ಲಿ ಕಾಡುಜಾತಿಯ ನಮ್ಮ ಪೂರ್ವಿಕರು ಇಲ್ಲಿ ಬಂದು ನೆಲೆಸಿದಾಗ ಇದ್ದ ರೀತಿಯಲ್ಲೇ ನಡೆಯುತ್ತಿತ್ತು. ಚಂದ್ರಗುಪ್ತ ಅಥವಾ ಅಶೋಕನ ಕಾಲದಲ್ಲಿ ಪಾಟ್ನಾದಿಂದ ದೆಹಲಿಗೆ ಹೋಗಲು ಎಷ್ಟು ವರ್ಷ ಬೇಕಾಗುತ್ತಿತ್ತೊ, ಕ್ರಿ. ಶ. 1800 ರಲ್ಲೂ ಅಷ್ಟೇ ದಿನ ಬೇಕಾಗುತ್ತಿತ್ತು.

ಬಹುಕಾಲದ ವರೆಗೆ ಎಲ್ಲ ದೇಶದಲ್ಲೂ ವೇದಾಂತಿಗಳು ಆಯುಧ ಯಂತ್ರಗಳೆಲ್ಲಕ್ಕೆ ಚೇತನ ಕೊಡುವ ಸರ್ವಚೈತನ್ಯಶಕ್ತಿಯೊಂದನ್ನು ಹುಡುಕಲು ಯತ್ನಮಾಡುತ್ತಲೇ ಇದ್ದರು. ಮನುಷ್ಯನಿಗೆ ಹಿಟ್ಟುರೊಟ್ಟಿ ಇದ್ದ ಹಾಗೆ ವಾಹನಗಳಿಗೆ ಯುದ್ಧಗಳ ಯಂತ್ರೋಪಕರಣಗಳಿಗೆ ಕೊಡಲು ಏನಾದರೂ ಅನ್ನ ಸಿಕ್ಕೀತೆ ಎಂದು ಮನುಷ್ಯ ಬಹಳ ಅರಸಿನೋಡಿದ. ಹಿಟ್ಟು ರೊಟ್ಟಿಯೆಂದರೇನು? ಬಲ; ನರನ ಮಿದುಳಿಗನ್ನು ಅವನ ಕೈಕಾಲಿಗನ್ನು ಬಲ ಅಲ್ಲವೆ? ಅಂಥ ಬಲ ವೊಂದು ಸಿಕ್ಕರೆ ನರನಿಗೆಷ್ಟೋ ಕಷ್ಟ, ದುಡಿತ ತಪ್ಪೀತು. ಇಟಲಿ ದೇಶದ ಶ್ರೇಷ್ಠ ಚಿತ್ರಿಕನಾದ ಲಿನಾರ್ಡೊ ವಿಂಚಿ ಕೂಡ (15ನೆ ಶತಮಾನ) ಆ ಬಲ ಕ್ಕಾಗಿ ಹುಡುಕಿದವರಲ್ಲೊಬ್ಬ. 16-17ನೆ ಶತಮಾನ ಗಳಲ್ಲಿ ಬುದ್ಧಿವಂತರನೇಕರು ಈ ಬೇಟೆಯಾಡುತ್ತಲೇ ಇದ್ದರು. ಅಡಗಿಓಡುವ ಓಡಿಯಡಗುವ ಮಿಗದ ಸುಳಿವು ಸಿಕ್ಕಹಾಗೆ ಇವರಿಗೂ ಸುಳಿವು ಸಿಕ್ಕಂತೆ ಅನಿಸುತ್ತಿತ್ತು.

ಕಡೆಗೆ 1768 ರಲ್ಲಿ ಆವಿ-ಯಂತ್ರವನ್ನು ಕಂಡುಹಿಡಿದರು. ನೀರು ಕುದಿಸಿ ಆವಿಯನ್ನು ಸಂಗ್ರಹಮಾಡಿ ಒಂದು ಕೊಳವೆಯಲ್ಲಿ ತುಂಬಿದರೆ ಅದರಿಂದ ಇತರ ಪದಾರ್ಥಗಳನ್ನು ಎಳೆಯಲೂ ಸರಿಸಲೂ ಬರುತ್ತದೆಂದು ಗೊತ್ತಾಯಿತು. ಆವಿಯು 'ಪಿಸ್ಟನ್' (ಹಿಂದಕ್ಕೂ ಮುಂದಕ್ಕೂ ಸರಿದಾಡುವ ಬೆಣೆ) ಸರಿ ಸಾಡಿದರೆ ಅದರಿಂದ ಗಾಲಿ ತಿರುಗುವ ಮೊದಲನೆ ರೇಲವೆ ಇಂಜಿನ್ ತಯಾ ರಾಯಿತು. ಆದರ ಹಿಂದೆ ಆವಿ-ಹಡಗೂ ನಾನಾ ವಸ್ತುಗಳನ್ನು ಮಾಡಲು ಕಾರ ಖಾನೆಯಲ್ಲಿ ಇಂಜಿನುಗಳು ಬಂದವು. ಆವಿ-ಇಂಜಿನಿನ ಪ್ರಭಾವ ದಿನದಿನಕ್ಕೆ ಬೆಳೆಯಿತು. ಈಗಂತೂ $1\frac{1}{2}$ ಲಕ್ಷ 2 ಲಕ್ಷ ಕುದುರೆಬಲವನ್ನು ಉತ್ಪತ್ತಿಮಾಡುವ ಯಂತ್ರಗಳೇ ಆಗಿವೆ.



ಕುದುರೆ ಬಲವಂತೆ! ಇದೇನು ವಿಚಿತ್ರ ಶಬ್ದ. ಏನು ಕುದುರೆಬಲ ಎಂದರೆ? ಅದೇ? ಅದು ತುಂಬ ಸುಲಭವಾದ ಮಾತು. ಕುದುರೆಬಲ ಎಂದರೆ ಕುದುರೆಯ ಬಲ, ಅಂದರೆ ಒಂದು ಕುದುರೆಗೆ ಇರುವಷ್ಟು ಬಲ. ಒಂದು ಕುದುರೆಯ ಬಲ




20 ಆಳಿನ ಬಲಕ್ಕೆ ಸಮವಂತೆ. ಒಂದು ಆವಿ-ಇಂಜಿನ್ನಿಗೆ 50 ಸಾವಿರ ಕುದುರೆ ಬಲ ಎಂದರೆ ಆ ಯಂತ್ರ 50 ಸಾವಿರ ಕುದುರೆ ಅಥವಾ 10 ಲಕ್ಷ ಆಳಿಗೆ ಸಮನಾಗಿ ಎಳೆದೀತು, ಸೂಕೀತು ಎಂತ. ಎಂಥ ಅದ್ಭುತ ಕೆಲಸ! ಒಂದು ಆವಿ-ಯಂತ್ರದಲ್ಲಿ 10 ಲಕ್ಷ ಆಳು ಸಿಕ್ಕ ಹಾಗಾಯಿತಲ್ಲವೆ. ಅದೇ ಆ 10 ಲಕ್ಷ




ಆಳೇ ಆಗಿದ್ದರೆ ಅವರೆಲ್ಲರಿಗೂ ಅನ್ನ ನೀಡಬೇಕೆಂದರೆ ಏನು ಗತಿ! ಆದರೆ ಅಂಥಾದ್ದೇನೂ ಇಲ್ಲ. ಈ ಆವಿ-ಯಂತ್ರಕ್ಕೆ ಬೇಕಾದುದೆಲ್ಲ ಸ್ವಲ್ಪ ನೀರು, ಸ್ವಲ್ಪ ಇದ್ದಲು ; ಅಷ್ಟೆ.

ಈ ಇಂದ್ರಜಾಲಕ್ಕೆ ಮನುಷ್ಯ ತೃಪ್ತನಾಗಲಿಲ್ಲ. ಮನುಷ್ಯನಲ್ಲಿ ಒಂದು ಬಗೆಯ 'ದೈವೀತೃಷ್ಣೆ' ಇದೆ. ಆ ಚಿರತೃಷ್ಣೆಯು ಕಿಡಿ ಹೊತ್ತಿ ಉರಿದು ಸುಮಾರು 1880 ರ ಹೊತ್ತಿಗೆ ಒಂದು ಎಣ್ಣೆ-ಇಂಜಿನ್ ಸೃಷ್ಟಿಸಿತು. ಆವಿಯನ್ನು ಸಂಗ್ರಹಿಸಿಡುವ ಬದಲು ಎಣ್ಣೆ-ಇಂಜಿನ್ನಿನಲ್ಲಿ ಎಣ್ಣೆ ಗಾಳಿ ಎರಡನ್ನೂ ಬೆರೆಸಿ ಅದನ್ನು 'ಸಿಲಿಂಡರ್' ಕೊಳವೆಯಲ್ಲಿ ತುಂಬಿಡಬೇಕು. ಆಮೇಲೆ ಅದನ್ನು ಹೊತ್ತಿಸಬೇಕು. ಒಡನೆಯೆ ಅದು ಢಂ ಎಂದು ಬಲವಾಗಿ ಹಾರಿ 'ಪಿಸ್ಟನ್ನ'ನ್ನು ಹಿಂದಕ್ಕೆ ದೂಡುತ್ತದೆ.

ಆವಿ-ಯಂತ್ರಕ್ಕಿಂತ ಅನೇಕವೇಳೆ ಎಣ್ಣೆ-ಯಂತ್ರ ಬೆಲೆಯಲ್ಲಿ ಅಗ್ಗ, ಬಲದಲ್ಲಿ ಮೇಲು. ಕ್ರಮೇಣ ಆವಿ-ಯಂತ್ರಕ್ಕಿಂತ ಎಣ್ಣೆಯುದೇ ಹೆಚ್ಚು ಬಳಕೆಗೆ ಬಂತು. ಕಾರಖಾನೆಗಳಲ್ಲಿ, ನೀರೆತ್ತುವ ಪಂಪಿಗೆ, ಹಡಗು ನಡೆಸಲಿಕ್ಕೆ, ವಿದ್ಯುತ್ತೊದಗಿಸಲಿಕ್ಕೆ ಇನ್ನೂ ಆವಿಯೇ ಉಪಯೋಗಿಸಲ್ಪಡುತ್ತಲಿವೆ. ಆದರೂ ಸರಾಸರಿ ಲೆಕ್ಕದಲ್ಲಿ ಎಣ್ಣೆ ಆವಿಯನ್ನು ಸೋಲಿಸುತ್ತಿದೆ.

ಆವಿಯಿಂದ ಆವಿ-ಹಡಗು ರೈಲು ಆದಂತೆ ಎಣ್ಣೆಯಿಂದ 'ಮೋಟಾರು'ಗಳಾಗಿವೆ.

ಇಲ್ಲಿಗಾದರೂ ಮನುಷ್ಯ ಸುಮ್ಮನಾದನೆ? ಇದಕ್ಕಿಂತಲೂ ಅದ್ಭುತವಾದ

ಬಲವನ್ನು ಕೊಡಬಹುದಾದ ಶಕ್ತಿಮೂಲಗಳು ಬಲಜನಕಗಳು ಏನಾದರೂ ಇವೆಯೋ ಎಂದು ಅವನ ಮನಸ್ಸಿನ ಚಾಪಲ್ಯ ಸುತ್ತಲೂ ಹುಡುಕುತ್ತಾ ಇದೆ. ಯೋಗ್ಯವೇ ಸರಿ. ಎಷ್ಟೇ ಅತಿಶಯ ಬಲವಾಗಲಿ ಅದು ಮನುಷ್ಯನ ಶಕ್ತಿ ಸಾಮರ್ಥ್ಯಗಳಿಗೆ ಮೀರಿದುದೇನಲ್ಲ. ಅದನ್ನು ಬಳಸಿಕೊಳ್ಳಲು ಇವರು ಸದಾ ಸಿದ್ಧ. ಆದರೆ ಬಲಜನಕವಾದ ಉರವಲು ಮಾತ್ರ ಬಹಳಿಲ್ಲ, ಸ್ವಲ್ಪವಿದೆ.

ಆದುದರಿಂದ ಮನುಷ್ಯ ತನ್ನ ಎಳೆತನದ ಹಳೆಗೆಳೆಯ ನೀರಿನ ಕಡೆ ಮತ್ತೆ ತಿರುಗುತ್ತಾನೆ. ಲೋಹಗಳನ್ನು ಸ್ವಾಧೀನಪಡಿಸಿಕೊಂಡು ದೊಡ್ಡ ದೊಡ್ಡ ಗಾಲಿಗಳನ್ನೂ ಉದ್ದುದ್ದ ತಂತಿಗಳನ್ನೂ ಮಾಡಿದಾನೆ ಮನುಷ್ಯ. ಈಗ ಅದೆಲ್ಲ ದೊಡ್ಡದೊಂದು ಭೂತಾಕಾರವಾಗಿದೆ. ಬಹಳ ಹಿಂದಿನ ಕಾಲದಲ್ಲಿ ಭೂಗರ್ಭ ದೊಳಗೆ ಹೂತುಹೋದ ಇದ್ದಲು, ಎಣ್ಣೆ ಮುಂತಾದ ಪುರಾತನ 'ವಸ್ತುಬಲದ ಕಾಲ' ನಮ್ಮ ದಿವಸಕ್ಕೇ ಮುಗಿಯುತ್ತ ಬಂದಿದೆ. ಇಂದಿನ ಕಾಲದ ಪದಾರ್ಥಗಳ ಮುಂದೆ ಅವೆಲ್ಲ ಲೊಡ್ಡು, ಮುದಿಗೊಡ್ಡು !

ಹಾಗಾದರೆ ಈ ನೀರಿನ ರಾಕ್ಷಸನನ್ನು ಹೇಗೆ ಪಳಗಿಸುವುದು. ಗುಡ್ಡದ ಮೇಲಿಂದ ನೀರು ಧುಮುಕಿ ಹರಿದು ಹೊಳೆಯಾಗುತ್ತದೆ. ಹಾಗೆ ಧುಮುಕುವಾಗ ಆ ಜಲಪಾತದಡಿಯ ನೀರನ್ನು ಹಿಡಿದರೆ ಪ್ರವಾಹವೇಗದ ಭೀಮಬಲ ಗೊತ್ತಾ ಗುತ್ತದೆ. ಗುಡ್ಡದ ಮೇಲೆಯೆ ಕೆರೆ ಕಟ್ಟಿ ಆ ನೀರನ್ನು ತಡೆದು ದೊಡ್ಡ ದೊಡ್ಡ ಕಬ್ಬಿಣದ ಕೊಳವೆಗಳಲ್ಲಿ ಅದನ್ನು ವೇಗವಾಗಿ ಕೆಳಕ್ಕೆ ಹರಿದೋಡುವಂತೆ ಮಾಡಿದರೆ ಅಂಥ ಪ್ರವಾಹವೇಗ ಬಲವನ್ನೇ ಸ್ವಾಧೀನಪಡಿಸಿಕೊಳ್ಳಬಹುದು. ಅಲ್ಲಿ ಅದರಿಂದ 'ಟರ್ಬೈನ್' ಎಂಬ ದೊಡ್ಡ ನೀರು-ಗಾಲಿಗಳನ್ನು ತಿರುಗಿಸ ಬಹುದು. ಈ 'ಟರ್ಬೈನ್' 'ಡೈನಮೋ' ಯಂತ್ರಗಳನ್ನು ತಿರುಗಿಸುತ್ತದೆ. ಡೈನಮೋದಿಂದ ವಿದ್ಯುತ್ ಹುಟ್ಟುತ್ತದೆ. ಈ ಬಲವನ್ನು ತಂತಿಗಳ ಮೂಲಕ ಸಾಗಿಸಿದರೆ ಅದು ಬೇರೆಬೇರೆ ಸಣ್ಣಸಣ್ಣ 'ಮೋಟಾರು'ಗಳನ್ನು ತಿರುಗಿಸುತ್ತದೆ. ಹಾಗೆ ಅವು ತಿರುಗಿದಾಗ ಪದಾರ್ಥಗಳನ್ನೆತ್ತುವುದು ಸರಿಸುವುದು ಮುಂತಾದ ಇದ್ದಲು, ಎಣ್ಣೆ-ಇಂಜಿನ್‌ಗಳು ಮಾಡುವ ಕೆಲಸಗಳನ್ನೆಲ್ಲ ಮಾಡುತ್ತವೆ. ನೀರಿನಂತೆಯೆ ಇದ್ದಲೂ ಎಣ್ಣೆಯೂ ವಿದ್ಯುತ್ತನ್ನು ಹುಟ್ಟಿಸಬಲ್ಲವು. ಭೇದವಿಷ್ಟೆ;

ಕಲ್ಲಿದ್ದಲು ಎಣ್ಣೆ ಮುಗಿದುಹೋದಾವು. ನೀರಿಗೆ ಮಾತ್ರ ಆಚಂದ್ರತಾರಾರ್ಕ ಪರ್ಜನ್ಯ ಪರ್ಯಂತ ಆಯುಸ್ಸು. ನೀರಿನ ಬಲ ಅಕ್ಷಯಶಕ್ತಿ.

ಇದ್ದಲು ಎಣ್ಣೆಗಿಂತ ವಿದ್ಯುತ್ ಕೆಲವು ವೇಳೆ ಅಗ್ಗ, ಸದಾ ಅಕ್ಷಯ. ಇಷ್ಟೇ ಅಲ್ಲ, ತಂತಿಗಳ ಮೂಲಕ ಎಷ್ಟೇ ದೂರವಾದರೂ ಸಾಗಿಸಬಹುದು. ಈಗ 200-300 ಮೈಲು ದೂರ ಸಾಗಿಸುತ್ತೇವೆ. ಅಮೆರಿಕದ ನಯಾಗರ ಜಲಪಾತದ ವಿದ್ಯುತ್ತು 450 ಮೈಲು ದೂರ ನ್ಯೂಯಾರ್ಕಿಗೆ ಹೋಗುತ್ತಿದೆ. ಈಗ ಹಡಗು 'ಮೋಟಾರು' ವಿಮಾನಗಳಿಗೆ ಮಾತ್ರ ವಿದ್ಯುತ್ತಿಲ್ಲ; ಅವಕ್ಕಿನ್ನೂ ಇದ್ದಲೋ ಎಣ್ಣೆಯೋ ಆಧಾರ.

ಇತರ ದೇಶಗಳಿಗಿಂತ ಬಹಳ ತಡವಾಗಿಯೇ ಆದರೂ ಹಿಂದುಸ್ಥಾನವೂ ಬಲಸಂಗ್ರಹದ ಹಾದಿಯಲ್ಲಿ ನಡೆದಿದೆ. ಈಗತಾನೆ ವಿದ್ಯುತ್ತಿನ ಕಾಲ ಪ್ರಾರಂಭ ವಾಗುತ್ತಿದೆ. 'ಮೋಟಾರಿ'ನಲ್ಲಾಗಲಿ ರೈಲಿನಲ್ಲಾಗಲಿ ಹೋಗುತ್ತಿರುವಾಗ ದಾರಿ ಯುದ್ದಕ್ಕೂ ನಿಮಗೆ ಉದ್ದವಾದ ಉಕ್ಕಿನ ಕಂಬಗಳು ಕಾಣುವುದಿಲ್ಲವೇ—



ನಾಲ್ಕು ಕಾಲು, ಹಲವು ಕೈಯವು? ನಮ್ಮ ದೇಶದಲ್ಲೆಲ್ಲ ಚಿಕ್ಕ ಚೆಲ್ಲಿದಂತೆ ಹರಡಿವೆ. ಅದರ ಒಂದೊಂದು ಕೈಯೂ ವಿದ್ಯುತ್ತು ಹರಿಯುವ ತಾಮ್ರದ ತಂತಿಗಳನ್ನು ಹಿಡಿದುಕೊಂಡಿದೆ.

ಈ ವಿದ್ಯುತ್ಪ್ರವಾಹದಲ್ಲಿ ಮೂರರೊಳಗೊಂದು ಪಾಲು ಜಲಬಲದಿಂದ ಬಂದದ್ದು. ಮುಂಬಯಿ ಮದರಾಸು ಪ್ರಾಂತಗಳಲ್ಲಿ ದೊಡ್ಡ ದೊಡ್ಡ ಜಲಬಲದ

ಕೇಂದ್ರಗಳಿವೆ. ಎಲ್ಲಕ್ಕಿಂತ ದೊಡ್ಡದು ಮುಂಬಯಿಯಲ್ಲಿ. ಭಾರಿ ವ್ಯಾಪಾರಿಗಳಾದ ಟಾಟಾ ಕಂಪನಿಯವರು ಪಶ್ಚಿಮಘಟ್ಟಗಳ ಮೇಲೆ ಉದ್ದಕ್ಕೂ ಕೆರೆಗಳನ್ನು ಕಟ್ಟಿ ಅಲ್ಲಿಂದ 1600 ಅಡಿ ಕೆಳಕ್ಕೆ ಘಟ್ಟದ ಬುಡಕ್ಕೆ ಕೊಳವೆಗಳ ಮೂಲಕ ನೀರು ಹರಿಯಿಸಿ ಅಲ್ಲಿ 2,30,000 ಕುದುರೆಬಲ ವಿದ್ಯುತ್ತನ್ನು ಉತ್ಪತ್ತಿಮಾಡುತ್ತಾರೆ. ಮುಂಬಯಿ ಪಟ್ಟಣಕ್ಕೆ ಬೆಳಕು ಈ ವಿದ್ಯುತ್ತಿನದೇ ; ಅಲ್ಲಿನ 69 ಅರಳೆ ಗಿರಣಿಗಳಲ್ಲಿ 53ಕ್ಕೆ ಇದೇ ಆಧಾರ; ಅಲ್ಲಿ ಟ್ರಾಂ ನಡೆವುದೂ, ಮುಂಬಯಿಯಿಂದ ಒಂದು ಕಡೆ ಪುಣೆಗೂ ಇನ್ನೊಂದು ಕಡೆ ಇಗಾತ್‌ಪುರಿಗೂ ರೈಲು ಓಡುವುದೂ ಇದರಿಂದಲೇ.

ಎರಡನೆ ಭಾರಿ ಕೇಂದ್ರ ದಕ್ಷಿಣ ಹಿಂದುಸ್ಥಾನದ ಕಾವೇರೀ ನದಿಗೆ ಲಗಾಮು ಹಾಕಿದ ಶಿವನಸಮುದ್ರದ್ದು. ಇದರಿಂದಲೇ ಮೈಸೂರು ಸಂಸ್ಥಾನ ದಲ್ಲಿ ಕೋಲಾರದ ಚಿನ್ನದ ಗಣಿಗಳ ಕೆಲಸವೂ ಇತರ ಕೆಲಸಗಳೂ ನಡೆಯು ತ್ತಿರುವುದು.

ಈ ಜಲ-ವಿದ್ಯುತ್ ಕೇಂದ್ರಗಳು 'ಗ್ರಿಡ್' ಪದ್ಧತಿಯಿಂದ ಕೆಲಸಮಾಡು ತ್ತಿವೆ. ಅಂದರೆ ಪರಸ್ಪರ ಸಮೀಪವಾದವನ್ನೆಲ್ಲ ತಂತಿಗಳ ಮೂಲಕ ಕೂಡಿಸಿ ಆ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಒಂದಕ್ಕೊಂದು ಆಸರೆಯಾಗಿರುವಂತೆ ಮಾಡುವುದು. ಇಂಥ 'ಗ್ರಿಡ್' ಕೇಂದ್ರಗಳು ಹಿಂದುಸ್ಥಾನದಲ್ಲಿ ಐದು ಇವೆ; ಮುಂಬಯಿ, ಮದರಾಸು ಮತ್ತು ಮೈಸೂರು, ಸಂಯುಕ್ತ ಪ್ರಾಂತ, ಪಂಜಾಬ್, ಸರಹದ್ದು ಪ್ರಾಂತಗಳಲ್ಲಿ. ಇವುಗಳಿಂದ ಒಟ್ಟು ಆರು ಲಕ್ಷ ಕುದುರೆಬಲ ವಿದ್ಯುತ್ತು ತಯಾರಾಗುತ್ತಿದೆ. ನೀರಿನಿಂದ ನಮಗೆ 1915 ರಲ್ಲಿ ದೊರೆಯುತ್ತಿದ್ದ ಬಲಕ್ಕಿಂತ ಇಂದು 15 ಪಟ್ಟು ಹೆಚ್ಚು ಸಿಗುತ್ತಿದೆ.

ಹಿಂದುಸ್ಥಾನದ ಮೂಡಲು ಭಾಗದಲ್ಲಿ ಜಲಬಲ ಕಡಮೆ. ಆದುದರಿಂದ ಅಲ್ಲಿ ಇದ್ದಲನ್ನು ಬಳಸುತ್ತಾರೆ. ಕಲಿಕತ್ತೆಯ ದೀಪಗಳಿಗೆ ಅಲ್ಲೇ ಇದ್ದಲಿಂದ ಮಾಡಿದ ವಿದ್ಯುತ್ತನ್ನು ಬಳಸುತ್ತಾರೆ. ಬಿಹಾರಿನ ಜಮಷೇದ್‌ಪುರವೂ ಅಷ್ಟೆ. ಇವಲ್ಲದೆ ಬಿಹಾರಿನಲ್ಲಿ ಗಯೆಯಲ್ಲೊಂದು, ಜಮುನಿಯತಾಂಡದಲ್ಲೊಂದು, ಇದ್ದಲು ಬಳಸುವ ಕೇಂದ್ರಗಳನ್ನು ಕಟ್ಟುತ್ತಿದ್ದಾರೆ. ಒಂದೊಂದರಲ್ಲೂ 20 ಸಾವಿರ ಕುದುರೆಬಲ ವಿದ್ಯುತ್ತು; ಎರಡೂ ಸೇರಿ ಒಂದು 'ಗ್ರಿಡ್'.

ನಮ್ಮ ದೇಶದಲ್ಲಿ ಒಟ್ಟು ಎಷ್ಟು ವಿದ್ಯುತ್ತನ್ನು ಬಳಸುತ್ತೇವೆ ನಾವು? ಹಿಂದುಸ್ಥಾನ 15 ಲಕ್ಷ ಕುದುರೆಬಲದಷ್ಟು ವಿದ್ಯುತ್ತನ್ನು ಬಳಸುತ್ತಿದೆಯಂತೆ. ಬಹಳ ಹೆಚ್ಚಾಗಿ ಕಾಣುತ್ತದೆಯಲ್ಲವೆ? ಬೇರೆ ದೇಶ, ಅದರಲ್ಲೂ ನಮಗಿಂತ ಚಿಕ್ಕ ದೇಶಗಳು ಎಷ್ಟೆಷ್ಟು ವಿದ್ಯುತ್ತನ್ನು ಬಳಸುತ್ತವೆಯೋ ನೋಡಿದರೆ ತಿಳಿಯುತ್ತದೆ. ಈ ಚಿತ್ರಗಳನ್ನು ನೋಡಿರಿ.




ಇತರರಿಗಿಂತ ನಾವೆಷ್ಟು ಹಿಂದೆ ಬಿದ್ದಿದ್ದೇವೆಂಬುದು ಹಾಗೆ ತಿಳಿಯುವುದಿಲ್ಲ. ನಾರ್ವೆ ದೇಶದಲ್ಲಿ ಜಲಬಲವೊಂದೇ 1000 ಜನರಿಗೆ 700 ಕುದುರೆಬಲ ವಿದ್ಯುತ್ತನ್ನು ಕೊಡುತ್ತಿದೆ. ಕೆನಡಾದಲ್ಲಿ 600 ಕುದುರೆಬಲ, ಸ್ವಿಡ್ಜರ್ಲೆಂಡಿನಲ್ಲಿ 500, ಸ್ವೀಡನ್‌ನಲ್ಲಿ 200, ಅಮೆರಿಕದ ಸಂಯುಕ್ತ ರಾಷ್ಟ್ರಗಳಲ್ಲಿ 100 ಕುದುರೆಬಲ. ಹಿಂದುಸ್ಥಾನದಲ್ಲೋ? 1000 ಜನಕ್ಕೆ ಒಂದೇ ಕುದುರೆಬಲ! ಮೇಲೆ ಸ್ವಲ್ಪ ಕೊಸರು!

ನಾವು ತುಂಬಾ ಕೀಳು ಅನಿಸುತ್ತದೆಯಲ್ಲವೆ? ಏನಾಶ್ಚರ್ಯ! ನಮ್ಮಲ್ಲಿ ಗಿರಣಿಗಳೇ ಕಡಮೆ. ನಮ್ಮ ರೈಲುಗಳೆಲ್ಲ ಮುಕ್ಕಾಲು ಮೂರುವೀಸಪಾಲು ಆವಿ ಯಂತ್ರಗಳಿಂದಲೇ ನಡೆಯುತ್ತವೆ. ದೊಡ್ಡ ನಗರಗಳನ್ನು ಬಿಟ್ಟರೆ ವಿದ್ಯುತ್ತನ್ನೇ ಕಾಣೆವು; ಅಲ್ಲಾದರೂ 'ಟೆಲಿಫೋನು' 'ರೇಡಿಯೋ' ಉಪಯೋಗಮಾಡು

ಸಾವಿರ ಜನರಿಗೆ ಕುದುರೆ ಬಲ



ನಾರ್ವೆ



ಕೆನಡಾ



ಸ್ವಿಟ್ಸರ್ಲೆಂಡ್



ಸ್ವೀಡನ್



ಸಂ. ರಾಷ್ಟ್ರ



ಹಿಂದುಸ್ಥಾನ

ವವರು ಬಹಳ ವಿರಳ. ವಿದ್ಯುತ್ತನ್ನು ನಮ್ಮ ಹಿತಕ್ಕಾಗಿ ಹೇಗೆ ಬಳಸಬಹುದೋ ನಮಗೆ ಗೊತ್ತಿಲ್ಲದುದರಿಂದ ಇಷ್ಟು ಸ್ವಲ್ಪವಾಗಿ ಬಳಸುತ್ತೇವೆ. ನಮಗೆ ಬೇಕೆಂದರೆ ಮಾತ್ರ ಇನ್ನೂ ಹೆಚ್ಚು ವಿದ್ಯುತ್ತು ಸಿಗಬಹುದೇನು? ಸಿಗಲಾರದೇ? ಹೆಚ್ಚಂತೆ ಹೆಚ್ಚು, ನೂರಾರು ಪಾಲು ಹೆಚ್ಚು ಸಿಕ್ಕೀತು!

ಕೆನಡಾ ಮತ್ತು ಅಮೆರಿಕದ ಸಂಯುಕ್ತ ರಾಷ್ಟ್ರಗಳನ್ನು ಬಿಟ್ಟರೆ ಹಿಂದುಸ್ಥಾನದ ಜಲಬಲಾಧಾರಗಳು ಇಡೀ ಜಗತ್ತಿನಲ್ಲಿ ಸರ್ವೋತ್ತಮವಾದುವು. ಕೆನಡಾದಲ್ಲಿ 4 ಕೋಟಿ 30 ಲಕ್ಷ ಕುದುರೆಬಲ, ಅಮೆರಿಕದ ಸಂಯುಕ್ತ ರಾಷ್ಟ್ರಗಳಲ್ಲಿ 3½ ಕೋಟಿ ಕದುರೆಬಲ ಆದರೆ ಹಿಂದುಸ್ಥಾನದಲ್ಲಿ 2 ಕೋಟಿ 70 ಲಕ್ಷ. ಅದರಲ್ಲಿ ನಾವೀಗ ಬಳಸಿಕೊಳ್ಳುತ್ತಿರುವುದು ಎಷ್ಟು ಗೊತ್ತೆ? ಸುಮಾರು 50ರಲ್ಲೊಂದು ಪಾಲು! ನಾವು ಬಳಸುವುದು 50ರಲ್ಲೊಂದು ಪಾಲಾದರೆ ಅಮೆರಿಕಾ ಫ್ರಾನ್ಸ್ ಜಪಾನುಗಳು ತಮ್ಮ ಸಂಗ್ರಹಗಳಲ್ಲಿ ಮೂರರಲ್ಲೊಂದು ಭಾಗ ಬಳಸುತ್ತಿವೆ. ಜರ್ಮನಿ ಅರ್ಧದಷ್ಟು ಬಳಸುತ್ತದೆ. ಸ್ವಿಟ್ಜರ್ಲೆಂಡು—ಇಂಥ ಚಿಕ್ಕ ರಾಷ್ಟ್ರಗಳಿಗೆ ರೂಪು ಚಿಕ್ಕದಾದರೂ ಬುದ್ಧಿ ಹೆಚ್ಚು—ಪ್ರಾಯಶಃ ಮುಕ್ಕಾಲುಪಾಲು ಬಳಸುತ್ತಿದೆ.

ಒಬ್ಬ ಇಂಗ್ಲಿಷ್ ' ಇಂಜನಿಯರ್ ' ಕೆಲವು ಕಾಲದ ಕೆಳಗೆ ಹಿಂದುಸ್ಥಾನದ ವಿಷಯವಾಗಿ ಒಂದು ಪುಸ್ತಕ ಬರೆದು ಅದರಲ್ಲಿ ನಮ್ಮ ಸಂಪತ್ಸಮೃದ್ಧಿಯನ್ನು ಇನ್ನೂ ಹೆಚ್ಚಾಗಿ ವರ್ಣಿಸಿದ. ನಮ್ಮ ಜಲಬಲವನ್ನು ಆತ ಹೀಗೆ ಲೆಕ್ಕ ಹಾಕಿದ. ನಮ್ಮ ಹಿಮಾಲಯ ಮತ್ತು ಇತರ ಪರ್ವತಗಳ ಉದ್ದ 3 ಸಾವಿರ ಮೈಲಿಯೆಂದ. 1000 ಅಡಿ ಎತ್ತರದಿಂದ ಬೀಳುವ 1 ಘನ ಅಡಿ ನೀರಿನಿಂದ 1 ಮಿನಿಟಿನಲ್ಲಿ 2 ಕುದುರೆಬಲ ಉತ್ಪತ್ತಿಯಾಗುತ್ತದೆ. ನದಿ, ನೈಸರ್ಗಿಕ ಜಲಪಾತಗಳಿಂದಲೇ ಒಟ್ಟು 15 ಕೋಟಿ ಕುದುರೆಬಲ ಹುಟ್ಟುತ್ತದೆಂದು ಲೆಕ್ಕಹಾಕಿದ. ಇದು ಭೋಳೇ ಲೆಕ್ಕ ; ನೆಲದಮೇಲೆ ಹರಿವ ನೀರನ್ನೆಲ್ಲ ಸಂಗ್ರಹಿಸಿ ವಿದ್ಯುತ್ತಾಗಿ ಮಾಡಲಾದೀತೇ? ಆದರೂ ಈ ಮಾತು ನಮ್ಮ ಪರ್ವತಬಲವನ್ನು ತಿಳಿಸುತ್ತದೆ.

ಇಷ್ಟು ಅನುಗ್ರಹ, ಸಹಾಯ ಪ್ರಕೃತಿಯಿಂದ ನಮಗಿರುವಾಗ ಏನು ಮಾಡಲಾರೆವು ನಾವು ? ನಮಗೆ ಬೇಕಾದ ಸಾಮಾನೆಲ್ಲ ಮಾಡಲು ದೊಡ್ಡ ಗಿರಣಿಗಳನ್ನು ಕಟ್ಟಬಹುದು. ವಿದ್ಯುತ್ತನ್ನು ಹಳ್ಳಿಗಳಿಗೆ ಸಾಗಿಸಿಕೊಂಡು ಹೋಗಿ ರೈತರ ಗುಡಿಸಲಿಗೆ ಮಿಂಚಿನ ದೀಪಗಳನ್ನೊದಗಿಸುವುದಲ್ಲದೆ ನೀರು ಸೇದಲು ವಿದ್ಯುತ್-ಪಂಪನ್ನು, ಬೀಸಲಿಕ್ಕೆ ತುಳಿಸಲಿಕ್ಕೆ ಗಾಣವಾಡಲಿಕ್ಕೆ ವಿದ್ಯುದ್ಯಂತ್ರಗಳನ್ನು ಉಪಯೋಗಿಸಲು ಕಲಿಸಬಹುದು. ಅಮೆರಿಕದ ಸಂಯುಕ್ತ ರಾಷ್ಟ್ರಗಳಲ್ಲಿ ಬೇಸಾಯಕ್ಕೆ ಎಷ್ಟು ವಿದ್ಯುತ್ತನ್ನುಪಯೋಗಿಸುತ್ತಾರೆಯೋ ಮುಂದಿನ ಚಿತ್ರ ನೋಡಿ. ಚಿತ್ರದಲ್ಲಿರುವ ಒಂದಾಳಿಗೆ 10 ಲಕ್ಷ ಜನ ಎಂತ ಲೆಕ್ಕ ; ಅವರು ಬಳಸುವ ವಿದ್ಯುತ್ತಿನ ಲೆಕ್ಕ ಒಂದು ಕುದುರೆಗೆ 50 ಲಕ್ಷ ಕು. ಬ.

ರೇಡಿಯೋ ಗ್ರಾಮೊಫೋನುಗಳನ್ನೂ ಟೆಲಿಫೋನು ಸಿನಿಮಾಗಳನ್ನೂ ಸ್ಥಾಪಿಸಿ ನಮ್ಮ ಜನರ ಬಾಳುವೆಗೊಂದು ನಸುಗೊಡಬಹುದು. ರೇಡಿಯೋದಲ್ಲಿ ಇನ್ನೂ ಹೆಚ್ಚಾಗಿ ಶಾಲಾ ಭಾಷಣಗಳನ್ನು ಮಾಡಿಯಾರು ; ಹಳ್ಳಿಗರಿಗಾಗಿ ಇಂಗ್ಲೀಷು ಬಿಟ್ಟು ಹಿಂದುಸ್ಥಾನಿಯಲ್ಲೂ ಪ್ರಾಂತಭಾಷೆಗಳಲ್ಲೂ ಭಾಷಣಗಳಾದಾವು. ಇವೆಲ್ಲ ಮಾಡಿಯೂ ವಿದ್ಯುದ್ಬಲ ಉಳಿದರೆ ಗಾಳಿಯಿಂದ ಸಾರಜನಕವನ್ನು ಸಂಗ್ರಹಿಸಿ ಅದರಿಂದ ಹೊಲಕ್ಕೆ ಚಲೋ ಸಾರವರ್ಧಕವಾದ ' ನಿಟ್ರೊಲಿನ್ ' ತಯಾರು ಮಾಡಲು ಆ ಬಲವನ್ನುಪಯೋಗಿಸಬಹುದು




















ಇದನ್ನೆಲ್ಲ ಮಾಡಲು ನಮಗೆ ವಿದ್ಯುದ್ಯಂತ್ರಗಳು ಬೇಕು. ಈಗಂತೂ ಈ ಯಂತ್ರವೆಲ್ಲ ಅಮೆರಿಕಾ ಯೂರೋಪಿನಿಂದ ಬರುತ್ತಿವೆ. 1938-39 ರಲ್ಲಿ 370 ಲಕ್ಷ ರೂಪಾಯಿ ಕೊಟ್ಟು ಈ ಯಂತ್ರಗಳನ್ನು ಕೊಂಡೆವು. ಯಂತ್ರ ಇದಕ್ಕಿಂತ ಅಗ್ಗವಾಗಬೇಕು. ನಮ್ಮ ದೇಶದಲ್ಲೇ ಮಾಡಿಕೊಂಡುಬಿಟ್ಟರೆ ಅಗ್ಗವಾಗುತ್ತವೆ.

ಇಷ್ಟೆಲ್ಲ ಮಾಡಿ ನಮ್ಮ ಇದ್ದಲಿನ ಸಂಗ್ರಹ, ಜಲಬಲವನ್ನೆಲ್ಲ ಬಳಸಿದ ಮೇಲೆ—ಅಷ್ಟು ಹೊತ್ತಿಗೆ ಜಗತ್ತಿಗೆಲ್ಲ ನಾವೇ ಸಿರಿವಂತ ನಾಡಾಗುತ್ತೇವೆ—ಕಡಲ ತೆರೆಗಳನ್ನು ಬಳಸಿಕೊಳ್ಳುವ ಅವಕಾಶವಿದೆಯಲ್ಲ. ಅಷ್ಟೇ ಅಲ್ಲ. ನಮ್ಮ ಮೇಲೆ ಬೆಳಗುವ ಸೂರ್ಯನ ಶಕ್ತಿಯನ್ನು ಸಂಗ್ರಹಿಸುವ ಪ್ರಯತ್ನ

ಮಾಡೋಣ. ಈಗಾಗಲೇ ಸೂರ್ಯಪ್ರಕಾಶದಿಂದಲೇ ನಡೆವ ಒಂದು ವಿದ್ಯುತ್ ಮೋಟಾರಾಗಿದೆ! ಅಲ್ಲಿಂದ ಭೂಗರ್ಭದ ಉಷ್ಣವನ್ನು ಬಳಸೋಣವಂತೆ ನೆಲ ದೊಳಕ್ಕೆ ಆಳವಾಗಿ ಸುರಂಗ ತೋಡಿ! ಇಂಥ ಯೋಚನೆ ನಿಮಗೆ ಹೊಳೆ ದಿದೆಯೆ? ಇಟಲಿಯಲ್ಲಿ ಲಾಡರೆಲ್ಲಾ ಎಂಬಲ್ಲಿ ನೆಲದೊಳಗಿಂದ ಆವಿ ಬರುತ್ತದೆ. ಅದರಿಂದ 4 ಸಾವಿರ ಕು. ಬ. ವಿದ್ಯುತ್ ಉತ್ಪತ್ತಿಯಾಗುತ್ತದೆ! ಹಾಗಾದರೆ ನಾವು ಮಾಡಲಾರದುದೇನು?



XI

# ಉಕ್ಕಿನ ಮನುಷ್ಯರು

ರಷ್ಯಾದೇಶದ ಸರ್ವಾಧಿಕಾರಿಗೆ 'ಸ್ಟಾಲಿನ್' ಎಂತ ಹೆಸರೇಕೆ ಬಂತು ಗೊತ್ತೆ? ಅದು ಅವನ ಹೆಸರಲ್ಲ. ಅವನ ಹೆಸರು ಜೋಸೆಫ್ ಜುಗಷ್ವಿಲಿ ರಷ್ಯಾ ನುಡಿಯಲ್ಲಿ 'ಸ್ಟಾಲಿನ್' ಎಂದರೆ ಉಕ್ಕಿನಂಥ ಮನುಷ್ಯ ಎಂದರ್ಥ. ಅವನು ಉಕ್ಕಿನಷ್ಟು ಗಟ್ಟಿ ಮನಸಿನವನಾದುದರಿಂದ ಅವನಿಗೆ ಆ ಹೆಸರಿಟ್ಟಿದಾರೆ.

ಅವನಲ್ಲದೆ ಉಕ್ಕಿನಂಥ ಮನುಷ್ಯರು ಸಾವಿರಾರು ಜನ ಇದಾರೆ ರಷ್ಯಾದಲ್ಲಿ. ಎಲ್ಲಾ ದೇಶದಲ್ಲೂ ಇದಾರೆ. ಸರ್ವಾಧಿಕಾರಿಗಳ ಹಾಗೆ ಅರಿಷ್ಟವಾಗದೆ ಅವರಷ್ಟೇ ನಾಡಿಗೆ ಉಪಕಾರಿಗಳಾಗಿದಾರೆ. ಯಾರು ಗೊತ್ತೆ? ಯಂತ್ರಗಳು. ಉಕ್ಕಿನಲ್ಲಿ ಹುಟ್ಟಿ ಮನುಷ್ಯ ಮಾಡುವ ಕೆಲಸವನ್ನೆಲ್ಲ ಅವನಿಗಿಂತ ಚೆನ್ನಾಗಿ ಬೇಗನೆ ಮಾಡುತ್ತವೆ.

ಯಾವ ದೇಶದ ನೆಲದೊಳಗೆ ಕಬ್ಬಿಣ ಮುಂತಾದ ಲೋಹಗಳೂ ಅದುರೂ ಇವೆಯೋ, ಎಲ್ಲಿ ನೀರೂ ಇದ್ದಲೂ ಕೂಡ ಸಮೃದ್ಧಿಯಾಗಿವೆಯೋ ಆ ದೇಶ ಸುಲಭವಾಗಿ ಯಂತ್ರಗಳನ್ನು ನಿರ್ಮಿಸಿಕೊಳ್ಳಬಲ್ಲದು. ಯಂತ್ರವನ್ನು ಮಾಡುವುದು ಲೋಹದಿಂದ, ನಡೆಸುವುದು ವಿದ್ಯುದ್ಬಲದಿಂದ.

ಹಿಂದುಸ್ಥಾನ ಮಾತ್ರ ಇದಕ್ಕೆ ಅಪವಾದ. ನಮ್ಮಲ್ಲಿ ಖನಿಜಸಂಗ್ರಹ ಬೇಕಾದಷ್ಟಿದೆ. ಜಗತ್ತಿಗೆಲ್ಲ ಮೇಲಾದ ಕಬ್ಬಿಣದ ನಿಧಿಯಿದೆ ನೆಲದೊಳಗೆ. ಇದ್ದಲೂ ಥಂಡಿಯಾಗಿದೆ. ಅಪಾರವಾದ ಜಲಬಲವೂ ಇದೆ.

ಇಷ್ಟೆಲ್ಲ ಇದ್ದರೂ ನಮ್ಮ ಅರಳೆ ಗಿರಣಿಗಳ, ವಿದ್ಯುದ್ಯಂತ್ರಗಳ ಯಂತ್ರ ಸಾಮಗ್ರಿಯೆಲ್ಲವೂ ಪರದೇಶದ್ದು. ಅವೇ ಅಲ್ಲ. ನಾವು ಬಳಸುವ **ಎಲ್ಲ** ಯಂತ್ರವೂ ಪರದೇಶದ್ದೇ. ಪ್ರತಿವರ್ಷವೂ 13-14 ಕೋಟಿ ರೂಪಾಯಿನ ಯಂತ್ರಗಳನ್ನು ತರಿಸುತ್ತೇವೆ. ಸೂಜಿ ಗುಂಡುಸೂಜಿ ತಿರುಪುಗಳಂಥ ಚಿಲ್ಲರೆ ಸಾಮಾನನ್ನು ಕೂಡ ಹೊರಗಿನಿಂದ ತರಿಸುತ್ತೇವೆ! ನಾವೇ ಮೋಟಾರು ಬಹುಬು ವಿಮಾನಗಳನ್ನು ಮಾಡಿಕೊಳ್ಳುವ ವಿಚಾರ ಸಹ ಒಂದೆರಡು ವರ್ಷಕ್ಕೆ ಮೊದಲು ಯಾರ ತಲೆಯಲ್ಲೂ ಬಂದಿರಲಿಲ್ಲ. ಈಗಲೂ ನಡೆಯುತ್ತಿರುವುದು ಬಣ ಮಾತೇ! ಜೇಗನೆ ಒಂದು ಮೋಟಾರು ಕಾರಖಾನೆ ಕಟ್ಟುತ್ತಾರಂತೆ. ಮೈಸೂರು ಸಂಸ್ಥಾನದಲ್ಲಿ ವಿಮಾನದ ಕಾರಖಾನೆ ಆಗಿದೆ, ವಿಶಾಖ ಪಟ್ಟಣದಲ್ಲಿ ಹಡಗಿನ ಕಾರಖಾನೆ ಆಗುತ್ತದೆಯಂತೆ.

ಹಾಗಾದರೆ ನಮ್ಮ ಕಬ್ಬಿಣದ ಅದುರಿಗೇನಾಗುತ್ತದೆ ಎಂದು ಕೇಳುತ್ತೀರಿ. 50 ವರ್ಷದ ಹಿಂದಿನ ವರೆಗೂ, ಈಗಲೂ 'ಮ್ಯಾಂಗನೀಸ್' ಅದುರನ್ನು ಕಳಿಸು ವಂತೆ, ಪರದೇಶಕ್ಕೆ ಅದುರನ್ನೆಲ್ಲ ಕಳಿಸುತ್ತಿದ್ದರು. ಆಮೇಲೆ ನಮ್ಮ ದಡ್ಡತನ ಸ್ವಲ್ಪ ಕಡಮೆಯಾಯಿತು. ಅದು ನಡೆದುದು ಹೀಗೆ. ಜಂಷೇಡ್‌ಜಿ ಟಾಟಾ ಎಂಬವರೊಬ್ಬರಿದ್ದರು. ಅವರು ಬಹಳ ಬುದ್ಧಿವಂತರು. ಪದಾರ್ಥಗಳನ್ನು ತಯಾರುಮಾಡುವ ಮೂಲಯಂತ್ರಗಳನ್ನು ತಯಾರುಮಾಡದೆ ಎಂದಿಗೂ ನಾವು ಆ ಪದಾರ್ಥಗಳನ್ನು ಮಾಡಲಾರೆವೆಂದು ಅವರಿಗೆ ತೋರಿತು. ಅಲ್ಲದೆ ಕಬ್ಬಿಣ ಉಕ್ಕುಗಳನ್ನು ತಯಾರುಮಾಡದೆ ಯಂತ್ರಗಳನ್ನು ಮಾಡಲೂ ಸಾಧ್ಯವಿಲ್ಲೆಂದೂ ತಿಳಿಯಿತು.

ಈ ಹೊಸ ಉದ್ಯೋಗವನ್ನು ಎಲ್ಲಿ ಆರಂಭಿಸಬೇಕೆಂದು ಆಲೋಚಿಸಿ ಬಿಹಾರ ಪ್ರಾಂತದ ಕಾಡುಹಳ್ಳಿಯೊಂದನ್ನು ಈ ಶತಮಾನದಾದಿಯಲ್ಲಿ ಟಾಟಾ ಆರಿಸಿದರು. ಆ ಹಳ್ಳಿಯ ಹೆಸರು ಸಾಕ್ಚಿ. ಆಗ ಆ ಹಳ್ಳಿಯಿತ್ತು; ಈಗಿಲ್ಲ. ಈಗ ಅದರ ಹೆಸರು ಜಂಷೇಡ್‌ಪುರ. ಈಗ ಅದು ಹಳ್ಳಿಯಲ್ಲ. ದಿನ ಬೆಳಗಾಗುವುದ ರೊಳಗಾಗಿ, ಆ ಕಾಡೂರು 140,000 ಜನವಸತಿಯ ನಗರವಾಗಿದೆ. ಇದು ಹೇಗಾಯಿತು?

ಹಿಂದಿನ ಕಾಲದಲ್ಲಿ ಕಾಡುಜನ ಹೊಟ್ಟೆಯ ಪಾಡಿಗಾಗಿ ಅಲ್ಲಿಂದಿಲ್ಲಿ ಇಲ್ಲಿಂದಲ್ಲಿ ಅಲೆಯುತ್ತಿದ್ದಾಗ ತಾವು ಎಲ್ಲಿ ತಳವೂರಬೇಕು, ಎಲ್ಲಿ ಮನೆಕಟ್ಟ ಬೇಕು, ಎಂಬುದನ್ನು ಪುರೋಹಿತನಿಗೋ ವೈದ್ಯನಿಗೋ ಒಪ್ಪಿಸುತ್ತಿದ್ದರು. ಈ ಜನಕ್ಕೆ ದೇವರೇ ಇಂಥ ಕಡೆ ಕಟ್ಟೆಂದು ಹೇಳುತ್ತಿದ್ದನಂತೆ.

ಜಂಷೇಡ್ಜಿ ಟಾಟಾ ಕೂಡ ಅಂಥ ಐಂದ್ರಜಾಲಿಕರೇ. ಅವರು ಆರಿಸಿದ ಸ್ಥಳ ಎಂಥದು! ಇದ್ದಲು, ಕಬ್ಬಿಣ, ತಾಮ್ರ, 'ಅಲ್ಯೂಮಿನಿಯಂ', ಕಾಗೆ ಬಂಗಾರ, ಸುಣ್ಣಕಲ್ಲು, 'ತಾಲೊಮೈಟ್'—ಕಾರಖಾನೆಗೆ ಬೇಕಾದ ಸಕಲ ವಸ್ತುಗಳೂ ಅಲ್ಲೇ ನೆಲದೊಳಗೆ ಅಡಗಿವೆ. ಕಲಕತ್ತೆಯಿಂದ ಮುಂಬಯಿಗೂ ನಾಗಪುರಕ್ಕೂ ಹೋಗುವ ರೈಲುರಸ್ತೆಗೆ ಇದೆ ಆಯೂರು. ಕಲಕತ್ತೆಗೆ ಹೋಗುವ ಜಲಮಾರ್ಗಕ್ಕೂ ಹತ್ತಿರ. ಕೆಲಸಮಾಡಲಿಕ್ಕೆ ಛೋಟಾನಾಗಪುರದ ಕಷ್ಟಜೀವಿ ಜನ. ಅವರು ತಿನ್ನುವುದು ಉಡುವುದು ಸ್ವಲ್ಪವೇ ಆದರೂ ದುಡಿತದಲ್ಲಿ ಮಾತ್ರ ನಿಸ್ಸೀಮರು.



ಹೀಗೆ ಧೂಳಿಮೋಡ, ಕಬ್ಬಿಣದ ಗುಡುಗಿನ ನಡುವೆ ಸಾಕ್ಚಿ ಉಕ್ಕಿನ ನಗರ—ಭಾರತದ ಪಿಟ್ಸ್‌ಬರ್ಗ್—ಆಯಿತು. ನಿಮಗೆ ತಿಳಿಯದೇನು? ಪಿಟ್ಸ್ ಬರ್ಗ್ ಅಮೆರಿಕಾದಲ್ಲಿ ಉಕ್ಕು ತಯಾರುಮಾಡುವ ಮಹಾ ಕೇಂದ್ರ, ಎಲ್ಲ ಕ್ಕಿಂತ ದೊಡ್ಡದು.

ಟಾಟಾ ಕಾರಖಾನೆ ಈಗ ಬ್ರಿಟಿಷ್ ಸಾಮ್ರಾಜ್ಯದಲ್ಲೆಲ್ಲ ದೊಡ್ಡ

ಉಕ್ಕಿನ ಕಾರಖಾನೆ. ಜಗತ್ತಿನ ಹನ್ನೆರಡು ಮಹಾ ಕಾರಖಾನೆಗಳಲ್ಲಿ ಒಂದು. ಅದರಲ್ಲಿ 50 ಸಾವಿರ ಕೆಲಸಗಾರರಿದ್ದಾರೆ, ವರ್ಷಕ್ಕೆ 12 ಲಕ್ಷ ಟನ್ ಕಬ್ಬಿಣ 10 ಲಕ್ಷ ಟನ್ ಉಕ್ಕು ತಯಾರಾಗುತ್ತದೆ. ಕಬ್ಬಿಣ ಉಕ್ಕು ಎಂದರೇನು ಗೊತ್ತೆ ?

ಲೋಹಗಳು ನೆಲದಲ್ಲಿ ಗಟ್ಟಿಯಾಗಿ ಉಂಡೆಗಳಾಗಿ ಸಿಗುವುದಿಲ್ಲ. ಅದುರು ಎಂಬ ಕಲ್ಲುಚೂರು ಮಣ್ಣಿನ ಉಂಡೆಗಳನ್ನು ಕರಗಿಸಿ ಮಾಡಬೇಕು. ಕಬ್ಬಿಣದ ಅದುರನ್ನು ತಂದು ದೊಡ್ಡ ದೊಡ್ಡ ಕೊಪ್ಪರಿಗೆಗಳಲ್ಲಿ ಹಾಕಿ ಕಾಯಿಸಿದರೆ ಆ ಬಿಸಿಗೆ ಕಬ್ಬಿಣ ಕರಗಿ ನೀರಾಗಿ ಹೊರಗೆ ಹರಿಯುತ್ತದೆ. ತರುವಾಯ ಅಚ್ಚುಗಳಲ್ಲಿ ಹಾಕಿ ಕಬ್ಬಿಣವನ್ನು ಆರಿಸಿ ತಣ್ಣಗೆ ಮಾಡುತ್ತಾರೆ. ಆ ಯಚ್ಚುಗಳು ಹಂದಿ ಯಾಕಾರವನ್ನು ಸ್ವಲ್ಪಮಟ್ಟಿಗೆ ಹೋಲುತ್ತವೆ. ಆದುದರಿಂದ ಆ ಯಚ್ಚುಗಳ ಲ್ಲಾದ ಕಬ್ಬಿಣಕ್ಕೆ ಇಂಗ್ಲಿಷಿನಲ್ಲಿ ಹಂದಿಗಬ್ಬಿಣ—ಪಿಗ್ ಐರನ್—ಎನ್ನುತ್ತಾರೆ. ನಾವು ಇದನ್ನು ತಾಂಡವಾಳ ಎನ್ನುತ್ತೇವೆ. ಈ ಕಬ್ಬಿಣ ಗಡುಸು, ಒರಟು. ಇದಕ್ಕೆ ಇಂಗಾಲವನ್ನೂ 'ಮ್ಯಾಂಗನೀಸ್'ನಂಥ ಲೋಹವನ್ನು ಬೆರೆಸಿದರೆ ಉಕ್ಕು ಆಗುತ್ತದೆ. ಅದರಿಂದ ಇದಕ್ಕೆ ತಡತ ಬರುತ್ತದೆ. ಬೇರೆ ಬೇರೆ ಆಕಾರ ಗಳಿಗೆ ತಿರುಗಿಸಲು ಅನುಕೂಲವಾಗುತ್ತದೆ.

ಮೊನ್ನೆಮೊನ್ನೆಯವರೆಗೂ ಕಬ್ಬಿಣದಿಂದ ಸಣ್ಣ ಸಣ್ಣ ವಸ್ತುಗಳು ಮಾತ್ರವೇ ಆಗುತ್ತಿದ್ದವು. 1779 ರ ವರೆಗೆ ಕಬ್ಬಿಣಸೇತುವೆ ಎಂಬುದಿರಲಿಲ್ಲ. ಆಗ ಇಂಗ್ಲೆಂಡಿನಲ್ಲಿ ಸೆವರ್ನ್ ನದಿಗೆ ಮೊದಲು ಕಬ್ಬಿಣ ಸೇತುವೆ ಹಾಕಿದರು. ಅಲ್ಲಿಂದೀಚೆಗೆ ಜಗತ್ತಿನಲ್ಲಿ ಎಷ್ಟೋ ವ್ಯತ್ಯಾಸವಾಗಿದೆ. ಕಬ್ಬಿಣಕ್ಕೆ ಬದಲಾಗಿ ಉಕ್ಕನ್ನು ಬಳಸುವುದು ಹೆಚ್ಚಾಗಿದೆ. ಕಬ್ಬಿಣಕ್ಕಿಂತ ಉಕ್ಕು ಗಟ್ಟಿ, ತಡತವೂ ಹೆಚ್ಚು. ಉಕ್ಕಿನಲ್ಲೂ ನಾನಾವಿಧ. ಸೇತುವೆಗೇ ಒಂದು ತರದ್ದು, ಗಾಲಿಗಳಿಗೇ ಒಂದು ತರದ್ದು. ಕೆಲವು ಬಗೆಯ ಉಕ್ಕು ಉಳಿದವಕ್ಕಿಂತ ಗಟ್ಟಿ. ಕೆಲವು ನಿಷ್ಕಳಂಕ; ಅವಕ್ಕೆ ತುಕ್ಕು ಹಿಡಿಯುವುದೇ ಇಲ್ಲ. 'ಮ್ಯಾಂಗನೀಸ'ನ್ನೂ ಇಂಗಾಲವನ್ನೂ ಬೇರೆಬೇರೆ ಪ್ರಮಾಣಗಳಲ್ಲಿ ಕಬ್ಬಿಣದೊಂದಿಗೆ ಬೆರೆಸುವುದರಿಂದ ಹೀಗೆ ಬೇರೆಬೇರೆ ವಿಧಗಳಾಗುತ್ತವೆ.


1,200,000
ಟನ್ ತಾಂಡವಾಳ
ಕಬ್ಬಿಣ
1,000,000
ಟನ್ ಉಕ್ಕು
50,000 ಜನರಿಗೆ ಉದ್ಯೋಗ
ಜಾಂಷೆದ್‌ಪುರ
ಕಲ್ಲಿದ್ದಲು
ಕಬ್ಬಿಣ
ತಾಮ್ರ
ಅಲ್ಯುಮಿನಿಯಂ
ಕಾಗೆಬಂಗಾರ
ಸುಣ್ಣಗಲ್ಲು
ಡೋಲಮೈಟ್

ಸುಮ್ಮನೆ ಗುಂಡಿ ಒತ್ತಿದರೆ ಸಾಕು, ಬೇಕುಬೇಕಾದ ಕೆಲಸವನ್ನೆಲ್ಲ ಮಾಡುವ ವಿಚಿತ್ರ ಯಂತ್ರಗಳೆಲ್ಲ ಆಗುವುದು ಉಕ್ಕಿನಿಂದಲೇ. ಒಂದುಕಡೆ ಬಾಯಿಗೆ ಉಕ್ಕಿನ ಗಟ್ಟಿಗಳನ್ನು ಕೊಟ್ಟರೆ ಇನ್ನೊಂದು ಕೊನೆಯ ಬಾಯಿಂದ ತಿರುಪು 'ನಟ್' ವೊಳೆ ಅಗಳಿಗಳನ್ನು ಸಾವಿರಗಟ್ಟಲೆ ಉಗುಳುವ ಯಂತ್ರ ವೊಂದಿದೆ. ಇನ್ನೊಂದರ ಬಾಯಿಗೆ ಮರದ ತುಂಡು ಕೊಟ್ಟರೆ ಅಚ್ಚುಕಟ್ಟಾಗಿ ಅಂಟಿಸಿ ತಯಾರುಮಾಡಿದ ಬೆಂಕಿಪೆಟ್ಟಿಗೆ ಹೊರಗೆ ಬರುತ್ತವೆ. ಇನ್ನೊಂದರಲ್ಲಿ ಹೊಗೆಸೊಪ್ಪು ಒಳಗೆ ಹೋದರೆ ಸಿಗರೇಟು ಹೊರಗೆ ಬರುತ್ತವೆ. ಇನ್ನು ಉಕ್ಕಿನಿಂದಾಗುವ ಬೈಸಿಕಲ್, ಅಕ್ಷರಯಂತ್ರ, ಹೊಲಿಗೆ ಯಂತ್ರ ಮೊದಲಾದುವು ನಿಮಗೆ ಗೊತ್ತೇ ಇದೆ.

ಕಬ್ಬಿಣ ಉಕ್ಕಿನ ಮಾತು ಬಂದು ಜಂಷೇಡ್‌ಪುರದಿಂದ ಬಹಳ ದೂರ ಬಂದುಬಿಟ್ಟೆವು. ನೀವು ಕೇಳುವುದು ಹಿಂದುಸ್ಥಾನಕ್ಕೆ ಬೇಕಾದ ಕಬ್ಬಿಣ ಉಕ್ಕು ಎಲ್ಲವನ್ನೂ ಟಾಟಾ ಕಾರಖಾನೆಯವರು ಕೊಡಬಲ್ಲರೇ ಎಂದು.

ಹಳೆಯ ಉತ್ತರವೇ, 'ಇಲ್ಲ'. ಅರಳೆ ಅರಿವೆಗಳಂತೆ ಎಲ್ಲ ವಿಷಯದಲ್ಲೂ ನಮ್ಮದು ಅರ್ಧಮರ್ಧ ಕೆಲಸ. ಉಳಿದವರು ಅದನ್ನು ಪೂರಯಿಸಿ ಲಾಭದ ಹೆಚ್ಚುಭಾಗ ಹೊಡೆದುಬಿಡುತ್ತಾರೆ. ನಾವು ತಯಾರುಮಾಡಿದ ಕಬ್ಬಿಣವನ್ನು ದಿನೇ ದಿನೇ ಹೆಚ್ಚುಹೆಚ್ಚಾಗಿ ಇಂಗ್ಲೆಂಡಿಗೆ, ಇತರ ದೇಶಗಳಿಗೆ ಕಳಿಸುವುದು; ನಮ್ಮ ಕಬ್ಬಿಣದಿಂದಲೇ ಉಕ್ಕನ್ನು ಉಕ್ಕಿನ ಸಾಮಾನನ್ನು ಅವರು ಮಾಡಿ ಮಾರಿದರೆ ಕೊಳ್ಳುವುದು; ಇದು ನಮ್ಮ ಹಣೆಯಬರಹ.

ಇದೆಲ್ಲ ಶುದ್ಧ ತಪ್ಪು. ನಮ್ಮ ಭೂಮಿಯಲ್ಲಿಷ್ಟು ಕಬ್ಬಿಣವಿಟ್ಟುಕೊಂಡು ಪರದೇಶಗಳಿಗೆ ಉಕ್ಕಿಗಾಗಿ, ಯಂತ್ರಗಳಿಗಾಗಿ ಹಣ ತೆರುವುದೆ! ಉಂಟೆ? ನಮ್ಮ ಹಾಗೆ ಯಾವ ಜನಾಂಗಕ್ಕೂ ಇಷ್ಟು ಮಂಕು ಕವಿದಿಲ್ಲ. ಜರ್ಮನರು ತಮ್ಮ ನೆಲದಿಂದ ವರ್ಷವರ್ಷವೂ 30 ಲಕ್ಷ ಟನ್ ಕಬ್ಬಿಣವನ್ನು ತೋಡುತ್ತಾರೆ. ಸಾಲದ್ದಕ್ಕೆ ಫ್ರಾನ್ಸ್ ಸ್ವೀಡನ್‌ಗಳಿಂದ ಕಬ್ಬಿಣವನ್ನು ತರಿಸಿ 2 ಕೋಟಿ 30 ಲಕ್ಷ ಟನ್ ಉಕ್ಕು ತಯಾರುಮಾಡುತ್ತಾರೆ. ನಾವು ಪ್ರಾಯಶಃ 20 ಲಕ್ಷ ಟನ್‌ನಷ್ಟು ಕಬ್ಬಿಣ ತೆಗೆಯುತ್ತೇವೆ. ಆದರೆ ಹೆಚ್ಚುಕಡಮೆ 10 ಲಕ್ಷ ಟನ್ ನಾವು ಉಕ್ಕು ಮಾಡುವುದು.

ಹಿಂದುಸ್ಥಾನದ ಜನಕ್ಕೆ ನಮಗೆ ಲೋಹಗಳ ಸಮಾಚಾರ ಗೊತ್ತಿರಲಿಲ್ಲ ವೆಂತಲ್ಲ. ದೆಹಲಿಯಲ್ಲಿ 1500 ವರ್ಷ ಹಳೆಯದಾದ ಕಬ್ಬಿಣ ಕಂಬವೊಂದಿದೆ. ಸುಲ್ತಾನ್‌ಗಂಜಿನಲ್ಲಿ ಬುದ್ಧದೇವನ ದೊಡ್ಡ ಕಂಚಿನವಿಗ್ರಹವೊಂದಿದೆ. ನೂರಾರು ವರ್ಷ ಹಿಂದೆಯೇ ಹಿಂದುಸ್ಥಾನದಲ್ಲಿ ಮಹ ತ್ಪ್ರಮಾಣದ ಲೋಹದ ರಾಶಿಯನ್ನು ಹೇಗೆ ಅನುಗೊಳಿಸಬೇಕೆಂಬುದು ಗೊತ್ತಿದ್ದುದರ ಗುರುತು ಅದು. ಆ ಕಾಲಕ್ಕೆ ಯೂರೋಪಿನವರಿಗೆ ಚಾಕು ಕತ್ತಿಯ ವಿನಾ ಉಕ್ಕನ್ನು ಬೇರೆ ರೀತಿಯಲ್ಲಿ ಬಳಸುವುದು ಗೊತ್ತೇ ಇರಲಿಲ್ಲ!



ಜರ್ಮನಿ ನಮ್ಮ ನಾಡಿಗಿಂತ ತೀರ ಚಿಕ್ಕದು. ನಮ್ಮಲ್ಲಿಯ ಕಬ್ಬಿಣದ ಶತಾಂಶ ವೂ ಅವರಿಗಿಲ್ಲ; ತಮಗೆ ಬೇಕಾದುದನ್ನು ಸ್ವೀಡನ್ ಫ್ರಾನ್ಸ್‌ಗಳಿಂದ ಕೊಳ್ಳುತ್ತಾರೆ. ನಮ್ಮಲ್ಲಿ ಕಬ್ಬಿಣ ಇಷ್ಟು ಯಥೇಚ್ಛವಾಗಿ ಬಿದ್ದಿರುವಾಗ ಜರ್ಮನಿಯಷ್ಟಾದರೂ ನಾವು ಉತ್ಪತ್ತಿ ಮಾಡಬೇಡವೆ? ಹಾಗೆ ಮಾಡಲು ಜಂಷೇಡ್‌ಪುರದಂಥ ಕಾರಖಾನೆ ಇನ್ನೂ ಬೆಳೆಯಬೇಕು.

ಏನೋ ಸ್ವಲ್ಪ ಮಾಡುತ್ತಾ ಇದಾರಾಗಲಿ ಸಾಲದು. ದಿನವೂ 1 ಸಾವಿರ ಟನ್ ಉತ್ಪತ್ತಿಮಾಡುವ ಕುಲಿಮೆ ಯಂತ್ರವೊಂದನ್ನು ಮೊನ್ನೆ ಮೊನ್ನೆ ಸ್ಥಾಪನೆ ಮಾಡಿದಾರೆ. ಐದು ಕಬ್ಬಿಣ ಕರಗಿಸುವ ಯಂತ್ರ ನಡೆಯುತ್ತಿವೆ. ಈಗೀಗ 'ಆಸಿಡ್' ಉಕ್ಕು ಎಂಬ ಹೊಸಬಗೆಯ ಲೋಹವನ್ನು ತಯಾರುಮಾಡುವ ಹೊಸ ಯಂತ್ರವೊಂದು ತಯಾರಾಗುತ್ತಿದೆ. ವಿದ್ಯುದ್ಬಲವನ್ನುತ್ಪತ್ತಿಮಾಡುವ

ಯಂತ್ರವೂ ಒಂದು ಹೊಸದಾಗಿ ನಿರ್ಮಿತವಾಗುತ್ತಿದೆ. ಈ ಎಲ್ಲ ಅಭಿವೃದ್ಧಿಯಿಂದ ಟಾಟಾ ಕಂಪನಿಯವರಿಗೆ ತಾವು 1939 ರಲ್ಲಿ ತಯಾರುಮಾಡುತ್ತಿದ್ದ 10 ಲಕ್ಷದ ಬದಲು 12½ ಲಕ್ಷ ಟನ್ ಉಕ್ಕು ವರ್ಷಕ್ಕೆ ತಯಾರುಮಾಡಬಹುದೆಂಬ ನಂಬಿಗೆಯಿದೆ. ಸಾಕೆ? ನಿಮಗೆ ಸಮಾಧಾನವೆ? ನನಗೇನೋ ಇಲ್ಲ. ಜರ್ಮನಿ 230 ಲಕ್ಷ ಟನ್ ತಯಾರುಮಾಡುತ್ತದೆಂಬುದನ್ನು ಮರೆಯಬೇಡಿ.

ಕೆಲವು ವರ್ಷಗಳ ತರುವಾಯ ಈಗಿನಕಿಂತ ಹೆಚ್ಚು ಉಕ್ಕು ನಮಗೆ ದೊರೆತೀತು. ಆಗ ಅದನ್ನೇನು ಮಾಡಬೇಕು ನಾವು? ಯಂತ್ರಗಳನ್ನು ಮಾಡೋಣ; ವಿದ್ಯುಜ್ಜನಕಯಂತ್ರ, ಗಿರಣಿ ನಡೆಸುವ ಯಂತ್ರ, ಅರಿವೆ ಚಪ್ಪಲಿಗಳ ಕಾರಖಾನೆಯ ಯಂತ್ರ, (ರೈಲು, ಮೋಟಾರು, ವಿಮಾನ, ಬೈಸಿಕಲ್, ಮೋಟಾರ್-ನೇಗಿಲು ಮುಂತಾದ) ಚಲಯಂತ್ರ, ಇವುಗಳ ಜೊತೆಗೆ ಕೊಡಲಿ, ಸುತ್ತಿಗೆ, ತಿರುಪು ಇತ್ಯಾದಿ ಚಿಲ್ಲರೆ ಸಾಮಾನನ್ನು ಮಾಡೋಣ. ಇಂಥವನ್ನೆಲ್ಲ ಮಾಡುವ ಕಾರಖಾನೆಗಳಿಗೆ ' ಇಂಜಿನೀರಿಂಗ್ ' ಕಾರಖಾನೆ ಅಥವಾ ಯಂತ್ರ ರಚನಾಗಾರ ಎನ್ನುತ್ತಾರೆ.

ಈಗ ನಾವು ಇವಾವುದನ್ನಾದರೂ ಮಾಡುತ್ತಿದೇವೆಯೆ? ನಮ್ಮಲ್ಲಿ ಯಂತ್ರ ನಿರ್ಮಾಣೋದ್ಯೋಗ ಎಂಬುದೊಂದು ಇದೆಯೆ? ಹೇಳಿಕೊಳ್ಳುವ ಹಾಗಿಲ್ಲ. ಟಾಟಾ ಕಂಪನಿಯಲ್ಲಿ ' ಅಗ್ರಿಕೊ ' ಎಂಬ ವ್ಯವಸಾಯ ಶಾಖೆಯೊಂದಿದೆ. ಅದರಲ್ಲಿ ವರ್ಷಕ್ಕೆ 3½ ಲಕ್ಷ ಕೊಡಲಿ, 1½ ಲಕ್ಷ ಸುತ್ತಿಗೆ, 9 ಲಕ್ಷ ಸಲಿಕೆ ತಯಾರಾಗುತ್ತವೆ. ರೈಲುಗಾಲಿ ಅಚ್ಚುಗಳನ್ನು ಮಾಡಲು ಕಾರಖಾನೆ ಕಟ್ಟುತಿದಾರೆ. ಅಲ್ಲಲ್ಲಿ ಸಣ್ಣಪುಟ್ಟ ಕಾರಖಾನೆಗಳಿವೆ. ಇಷ್ಟೆ ನಮ್ಮ ಬಂಡವಾಳ!

ಉಕ್ಕೇನೊ ಆಯಿತು. ಯಂತ್ರಗಳನ್ನು ಎಲ್ಲಿ ಮಾಡಬೇಕು, ಹೇಗೆ ಮಾಡಬೇಕು? ಈ ವಿಚಾರವನ್ನು ಪರಿಶೀಲಿಸುತ್ತಿರುವ ಬುದ್ಧಿವಂತರು ಕೆಲವರು ಈ ಪ್ರಶ್ನೆಗೆ ಉತ್ತರ ಕೊಟ್ಟಿದಾರೆ. ಅವರು ಹೇಳಿದುದು ಎರಡು ದೊಡ್ಡ ಕಾರಖಾನೆ ಕಟ್ಟಿ ಯಂತ್ರನಿರ್ಮಾಣದ ಕೆಲಸವನ್ನು ಅವೆರಡರ ನಡುವೆ ಹಂಚಬೇಕು. ಒಂದು ಭಾರವಾದ ದೊಡ್ಡ ಅಖಂಡ ಯಂತ್ರಗಳನ್ನೂ ' ರೈಲು-ಇಂಜಿನ್ ' ' ಬಾಯಿಲರ್ '-ಕಡಾಯಿ, ' ವಾಗಿನ್ನು ' ಅಂಥವನ್ನು ಮಾಡಲಿ. ಇನ್ನೊಂದು

'ಮೋಟಾರು', ಬಸ್ಸು, 'ಮೋಟಾರು'-ನೇಗಿಲು, ಬೇಸಾಯದ ಮುಟ್ಟು, 'ಬೈಸಿಕಲ್', ವಿಮಾನ, ದೋಣಿ, ಅರಳೆಗಿರಣಿ ಯಂತ್ರ, ಉಕ್ಕಿನ ಮನೆ ಸಾಮಾನು, ಚಾಕು, ಚೂರಿ, ಇನ್ನೂ ಚಿಲ್ಲರೆ ಸಾಮಾನೆಲ್ಲವನ್ನೂ ಮಾಡಲಿ. ಒಂದು ಭಾರವಾದ ಗಡಸು ಕೆಲಸವನ್ನು ಮಾಡಲಿ, ಇನ್ನೊಂದು ಹಗುರವಾದ ಕೆಲಸವನ್ನು ಮಾಡಲಿ.

ಈ ಕಾರಖಾನೆಗಳು ಎಲ್ಲಿರಬೇಕು? ಗಡುಸು ಕೆಲಸದ್ದು ಬಿಹಾರಿನಲ್ಲಿ ಜಂಷೇಡ್‌ಪುರದ ಹತ್ತಿರವಿರಲಿ ಅನ್ನುತ್ತಾರೆ. ಕಾರಣ ಮೇಲೆಯೆ ತಿಳಿಯುತ್ತದೆ ಯಲ್ಲವೆ? ಅಂಥ ಕಾರಖಾನೆಗೆ ಮುಖ್ಯವಾಗಿ ಬೇಕಾದುದು ಉಕ್ಕು. ಆದುದರಿಂದ ಜಂಷೇಡ್‌ಪುರಕ್ಕೆ ಈ ಕಾರಖಾನೆ ಹತ್ತಿರವಿದ್ದಷ್ಟು ಒಳಿತು. ಉಕ್ಕನ್ನು ದೂರ ಪ್ರದೇಶಗಳಿಂದ ಅಲ್ಲಿಗೆ ಸಾಗಿಸುವ ವೆಚ್ಚ ತಪ್ಪುತ್ತದೆ.

ಇನ್ನೊಂದು ಕಾರಖಾನೆಯೆಲ್ಲಿರಬೇಕು? ಮುಂಬಯಿ. ಏಕೆ ಹೇಳಿ ನೋಡೋಣ. ನಿಮ್ಮ ಉತ್ತರಕ್ಕೂ ತಜ್ಞರ ಉತ್ತರಕ್ಕೂ ಹೊಂದಿಕೆಯಾಗು ತ್ತೇನೋ ನೋಡೋಣ. ಮುಂಬಯಿಯಲ್ಲಿ ನೀರು ಸಮೃದ್ಧ; ಟಾಟಾ ಕೇಂದ್ರದಿಂದ ವಿದ್ಯುತ್ತೂ ಅಗ್ಗವಾಗಿ ಸಿಗುತ್ತದೆ. ಹನ್ನೆರಡೂ ತಿಂಗಳು ಅಲ್ಲಿ ಹವಾಮಾನ ಸಾಧಾರಣವಾಗಿ ಹಿತವಾಗಿರುತ್ತದೆ. ಮೋಟಾರಿನದೋ ದೋಣಿಯದೋ ಸಾಮಾನು ಬೇಕಾಗಿದ್ದರೆ ಈಗಲೂ ಯೂರೋಪು ಅಮೆರಿಕಾ ದಿಂದ ತರಿಸುವಾಗ ಮುಂಬಯಿ ತಾನೆ ಹಿಂದುಸ್ಥಾನದ 'ತೋರಣಗಲ್ಲು, ದರ್ವಾಜಿ'? ಅಲ್ಲದೆ ಮೋಟಾರು ದೋಣಿ ಗಿರಣಿಗಳ ಯಂತ್ರಗಳಿಗೆಲ್ಲ ಮುಂಬಯಿ ಅಹಮದಾಬಾದಿನಲ್ಲೇ ಗಿರಾಕಿ ಹೆಚ್ಚು!

ಇಂಥ ಯಂತ್ರರಚನಾಗಾರಗಳಿಗೆ ಮುಂದೆ ಕೈತುಂಬ ಕೆಲಸವೂ ಒಳ್ಳೇ ಲಾಭವೂ ಇವೆ. ಇಂಥವು ಅಗತ್ಯವೆಂದು ಹೇಳಬೇಕೆ? ನಾವು ದಿನಬಳಕೆಗೆ ಉಪಯೋಗಿಸುವ ಪದಾರ್ಥಗಳೆಲ್ಲ ಹಿಂದುಸ್ಥಾನದಲ್ಲಿಯೆ ಆಗಬೇಕು. ಅವು ಚೆನ್ನಾಗಿಯೂ ಅಗ್ಗವಾಗಿಯೂ ಇರಬೇಕು ಎಂದರೆ ಅವನ್ನು ಮಾಡುವ ಯಂತ್ರಗಳು ಬೇಕು. ಈ ಯಂತ್ರಗಳನ್ನು ಮಾಡಲಿಕ್ಕೆ ಬೇರೆ ಯಂತ್ರ ಬೇಕು. ಇವೇ ಯಂತ್ರರಚನಾಗಾರಗಳಲ್ಲಿ ಇರುವವು, ಯಂತ್ರವನ್ನು ಮಾಡುವ ಯಂತ್ರ.

XII

# 'ಹಿಂದೂಸ್ತಾನ್ ಹಮಾರಾ'

'ಚಲೋ ಗಾಳಿಗೋಪುರ, ಪರವಾಯಿಲ್ಲ' ಅನ್ನುತ್ತಾ ಇದೀರಿ ನೀವು, ಈ ಪುಸ್ತಕ ಓದಿ. ನನಗೂ ಕೇಳಿಸಿತು. ಬಿರಣಿ ಸುಡಬೇಡ! ಅಖಂಡಕ್ಷೇತ್ರದಲ್ಲಿ ಜಂಟಿಬೇಸಾಯ ಮಾಡು! ಬಟ್ಟೆ ಆಮದು ಮಾಡಬೇಡ! ಕಬ್ಬಿಣವನ್ನು ಹೆಚ್ಚು ಹೆಚ್ಚಾಗಿ ಉಕ್ಕುಮಾಡು! ನಾಡಿಗೆಲ್ಲ ವಿದ್ಯುತ್ತು ಹರಡು! ನಮಗೆ ಬೇಕಾದ ಯಂತ್ರಗಳನ್ನೆಲ್ಲ ಮಾಡು! ಅದನ್ನು ಮಾಡು, ಇದನ್ನು ಮಾಡು; ಮಾಡಿದರೆ ಹಿಂದುಸ್ಥಾನ ಸ್ವರ್ಗವಾಗುತ್ತದೆ. ಆಚಾರ್ಯರೇನೋ ಪುರಾಣ ಹೇಳಿಯಾರು, ಕೇಳುವವರು ಯಾರು? ಇದೆಲ್ಲ ಸರಿಯೆ, ಆದರೆ ಇದನ್ನೆಲ್ಲ ಮಾಡುವವರು ಯಾರು, ಮಾಡಿಸುವವರು ಯಾರು ಅನ್ನುತ್ತೀರಿ. ನಿಜವೇ: **ಯಾರು**? ಸರಿಯಾದ ಸ್ಥಳಕ್ಕೇ ಕೈ ಹಾಕಿದಿರಿ. ಆಚಾರ್ಯರಿಗೆಲ್ಲಿ ಧರ್ಮಸಂದೇಹವೋ ಕೇಳುವವರಿಗೂ ಅಲ್ಲೇ ಕುತೂಹಲ.

ಆದರೆ ನಾನೀ ಪ್ರಶ್ನೆಗೆ ಉತ್ತರ ಹೇಳಲೇ? ಕೇಳುತ್ತೀರಾ? 'ಯಾರು ಅಂದರೆ—**ನೀವು**.' ಹೌದು, ನೀವೇ. ಹರೆಯದ ಗೆಳೆಯ, ಹರೆಯದ ಗೆಳತಿ. ಈ ಪುಸ್ತಕದ ಪ್ರಾರಂಭದಲ್ಲಿ ಬಂದ ಒಗಟಿನ ತುಣುಕುಗಳನ್ನೆಲ್ಲ ಜೋಡಿಸಿ ಒಗಟು ಬಿಡಿಸಲಿಕ್ಕೆ ನೀವೇ ತಕ್ಕವರು. ನೀವೇ ಅವನ್ನು ಸೇರಿಸಿ ಚಲೋ ಚಿತ್ರ ಒಂದನ್ನು ರಚಿಸಬಲ್ಲವರು. ಇದು **ನಿಮ್ಮ** ದೇಶ; ಇಂದಲ್ಲ ನಾಳೆಯಾದರೂ ನಿಮ್ಮದೇ ಆದೀತು. **ನೀವು** ಮಾಡದಿದ್ದರೆ ಇದನ್ನೆಲ್ಲ ಮತ್ತಾರು ಮಾಡಬೇಕು?

'ಆದರೆ ಹೇಗೆ ಮಾಡಬೇಕು?' ಅನ್ನುತ್ತೀರಿ ನೀವು. ಏಕೆ? ಜಗತ್ತಿನಲ್ಲಿ ಎಲ್ಲರೂ ತಮ್ಮ ತಮ್ಮ ಕೆಲಸ ಹೇಗೆ ಮಾಡಿಕೊಳ್ಳುತ್ತಾರೆ? ತಮ್ಮ ರೈಲು ನಡೆಸಿ, ಅಂಚೆ ಸಾಗಿಸಿ, ಹೊಲಕ್ಕೆ ನೀರು ಹರಿಯಿಸಿ, ನಾಡಿನಿಂದ ಹೊರಕ್ಕೆ ಸಾಮಾನು

ಕಳಿಸಿ, ಒಳಕ್ಕೆ ತರಿಸಿ ಮಾಡುತ್ತಾರೆಯಲ್ಲ. ಅದನ್ನೆಲ್ಲ ತಮ್ಮ ಸರಕಾರದ ಮೂಲಕ ಮಾಡಿಸಿಕೊಳ್ಳುತ್ತಾರೆ. ರಾಷ್ಟ್ರ ಅಥವಾ ಸರಕಾರವೇ, ದೇಶದಲ್ಲಿ ಬಾಳುತ್ತಿರುವ ನಾವು ನೀವು ಬಯಸಿದ ಹಾಗೆ ಮಾಡುವ ಒಂದು ಯಂತ್ರ, ಸಾಧನ. ಅದನ್ನೆಲ್ಲ **ಮಾಡಬೇಕಾದುದು** ಅದರ ಕರ್ತವ್ಯ. ಅನೇಕಸಲ ಅದು ಮಾಡದು.

ಏನು ದುರ್ದೈವವೋ ಸರಕಾರಗಳೆಲ್ಲ ಬಹುಮಟ್ಟಿಗೆ ಸೋಮಾರಿ ಛತ್ರಗಳು; ತುಂಬಾ ನಿಧಾನ. ಜನ ಎಷ್ಟು ಬಲಾತ್ಕಾರಮಾಡಿದರೋ ಅಷ್ಟೇ ಕೆಲಸ. ಜನ ಕೊಂಚ ಅಸಡ್ಡೆಯಾಗಿದ್ದರೆ, ನಿಧಾನವಾಗಿದ್ದರೆ ಸರಕಾರವೂ ನಿಧಾನ, ಅದಕ್ಕೂ ಅಸಡ್ಡೆ. ಯಾರೋ ಹೇಳಿದಾರೆ 'ಯಥಾ ಪ್ರಜಾ ತಥಾ ರಾಜಾ.' ನೀವು ಎಂಥ ಪ್ರಜೆಯಾಗುತ್ತೀರೋ ನಿಮ್ಮ ದೇಶವನ್ನು ಅದರ ಸಮಸ್ಯೆಗಳನ್ನು ಎಷ್ಟು ಮಟ್ಟಿಗೆ ಅರ್ಥ ಮಾಡಿಕೊಳ್ಳುತ್ತೀರೋ ಅದರ ಮೇಲೆಯೆ ಎಲ್ಲವೂ ಆಧಾರ ಗೊಂಡಿದೆ. ಇದನ್ನು ನೆನಪಿಡಿ.

ಆ ರೀತಿಯ ಅರ್ಥಶಾಸ್ತ್ರಜ್ಞಾನದ ಹಾದಿಯನ್ನು ತೋರಿಸುವುದೇ ಈ ಪುಸ್ತಕದ ಪ್ರಯತ್ನ. ಇದರಿಂದ ನಿಮಗೇನೇನು ತಿಳಿಯಿತೋ ನಾನರಿಯೆ. **ನಾನೇನು** ತಿಳಿದುಕೊಂಡೆನೋ ಹೇಳಲೇ? ಹಿಂದೂದೇಶದವರು ನಾವು ಶುದ್ಧ ಹುಚ್ಚರಂತೆ ನಮ್ಮಲ್ಲಿರುವುದೆಲ್ಲ ವ್ಯರ್ಥವಾಗಿ ಹೋಗಲು ಅವಕಾಶಕೊಡುತ್ತಿದೇವೆ. ನಮ್ಮ ನಾಡಿನ ಬಾಳುವೆಯನ್ನು ನಾವು ಕ್ರಮವಾಗಿ ವ್ಯವಸ್ಥೆಯಿಂದ ರಚಿಸಿ ಕೊಳ್ಳದಿರುವುದೇ ಇದಕ್ಕೆ ಕಾರಣ. ಆ ಹೊತ್ತಿಗಾಹೊತ್ತಿಗೆ ಅಹಸ್ಪಹನಿ ಕಾಲಕ್ಷೇಪಮಾಡುತ್ತ ಹೇಗೋ ಹಾಗೆ ಅಂತೂ ಇಂತೂ ಬದುಕುತ್ತ ಎಂಥ ಪೇಚಿನೊಳಗೆ ಸಿಕ್ಕಿದೇವೆ ನೋಡಿ.

ನಮ್ಮ ಕೈಗೆ ರಾಜ್ಯ ಬಂದರೆ, ನಮ್ಮ ಆಡಳಿತ ಮಾಡಬೇಕಾದ ಮೊದಲನೆ ಕೆಲಸ ಈಗ ನಮ್ಮ ದೇಶದಲ್ಲಿ ವ್ಯರ್ಥವಾಗುತ್ತಿರುವುದನ್ನೆಲ್ಲ ನಿಲ್ಲಿಸಿ ನಮ್ಮ ಜನರಿಗೆ ಲಾಭವಾಗುವ ಹಾಗೆ ನಮ್ಮ ಜನಬಲವನ್ನೂ ಪ್ರಕೃತಿಬಲವನ್ನೂ ಬಳಸುವಂತೆ ಒಂದು ಹಂಚಿಕೆ ಹಾಕುವುದು.

ಅಂಥ ಯೋಜನೆ ಒಂದು ದಿನದಲ್ಲಾಗುವುದಿಲ್ಲ. ಅದನ್ನು ಒಂದು ರೂಪಕ್ಕೆ ತರಲು ವರ್ಷಗಟ್ಟಲೆ ದುಡಿಯಬೇಕು. ಅಂತಲೇ ಅಂಥ ಯೋಜನೆಯನ್ನು

ಹಿಂದುಸ್ಥಾನ ಸಂ. ರಾಷ್ಟ್ರ ಸಂ. ರಾಜ್ಯ ಜರ್ಮನಿ ಜಪಾನ್









ಆತ್ಮಹತ್ಯೆ






ಸಾಕ್ಷರತೆ






ರೇಡಿಯೋ




ಆಯುಸ್ಸು : ಅಂಕೆಗಳು ಸರಾಸರಿ ಒಬ್ಬ ಮನುಷ್ಯನ ಬಾಳುವೆಯನ್ನು ತೋರಿಸುತ್ತವೆ.

ಆತ್ಮಹತ್ಯೆ: 10 ಲಕ್ಷ ಜನಾಂಗದಲ್ಲಿ ಆತ್ಮಹತ್ಯೆಮಾಡಿಕೊಳ್ಳುವವರ ಸಂಖ್ಯೆ.

ಸಾಕ್ಷರತೆ: ಪ್ರಾಯಕ್ಕೆ ಬಂದ ನೂರರ ಗುಂಪಿಗೆ.

'ರೇಡಿಯೋ': ಹತ್ತುತ್ತು ಸಾವಿರ ಜನರ ಗುಂಪಿಗೆ ಇರುವ 'ರೇಡಿಯೋ'ಗಳು.

ಸಿದ್ಧಮಾಡಲು ಈಗಾಗಲೇ ಪ್ರಯತ್ನ ನಡೆದಿವೆ. ರಾಷ್ಟ್ರೀಯ ಯೋಜನಾ ಸಮಿತಿ ಇದಕ್ಕಾಗಿ ದುಡಿಯುತ್ತಿದೆ. ಪಂಡಿತ ಜವಾಹರಲಾಲ ನೆಹರು ಅದಕ್ಕೆ ಅಧ್ಯಕ್ಷರು. ಅದರ ಸದಸ್ಯರಲ್ಲಿ ರಾಜಕೀಯಪಟುಗಳೂ ವಿಶ್ವವಿದ್ಯಾಲಯದ

ಪಂಡಿತರೂ ವಿಜ್ಞಾನಶಾಸ್ತ್ರಿಗಳೂ ಯಂತ್ರನಿಪುಣರೂ ಉದ್ಯೋಗಪ್ರವೀಣರೂ—ಗಂಡುಸರೂ ಹೆಂಗುಸರೂ—ಇದಾರೆ.

ಹಂಚಿಕೆ ಹಾಕುವವರಿಗೊಂದು ದೊಡ್ಡ ಆತಂಕವಿದೆ; ಎಲ್ಲವನ್ನೂ ಒಟ್ಟಿಗೆ ಒಂದೇಸಲ ಮಾಡಲಾರರು. ಈ ದೊಡ್ಡ ಯೋಜನೆ ಪ್ರತಿಯೊಂದಕ್ಕೂ ತುಂಬಾ ಹಣ, ಜನ ಸಹಾಯ ಬೇಕು. ಎಲ್ಲವನ್ನೂ ಒಂದೇಸಲ ಮಾಡಲು ಹಿಂದುಸ್ಥಾನದಲ್ಲಿ ಎರಡೂ ಸಾಕಷ್ಟಿಲ್ಲ. ಒಂದೇ ವರ್ಷದಲ್ಲಿ **ಅದನ್ನೂ ಇದನ್ನೂ ಇನ್ನೊಂದನ್ನೂ** ಮಾಡಲು ಸಾಧ್ಯವಿಲ್ಲ. ಆದುದರಿಂದ ಸದಾ ಒಂದು ಪ್ರಶ್ನೆ ಏಳುತ್ತದೆ. ಇದು ಮೊದಲೆ **ಅಥವಾ** ಅದು ಮೊದಲೆ?

ಇಷ್ಟೇ ಅಲ್ಲ, ಯೋಜನೆ ಮಾಡುವವರು ಯಾವ ತರದ ಬಾಳುವೆಗಾಗಿ ಈ ಯೋಜನೆ, ಎಂಥ ಸಮಾಜವನ್ನು ಬೆಳೆಸಬೇಕು ಎಂದು ವಿಚಾರಮಾಡಬೇಕಾಗುತ್ತದೆ. ಹಂಚಿಕೆ ಹಾಕಬೇಕಾದುದೇನೋ ಸರಿ. ಆದರೆ **ಯಾತಕ್ಕಾಗಿ** ಹಂಚಿಕೆ? ಹಿಂದುಸ್ಥಾನದಲ್ಲಿ ದೊಡ್ಡ ದೊಡ್ಡ ನಗರಗಳನ್ನು ಕಟ್ಟಲಿಕ್ಕೋ ಇಲ್ಲವೆ ಸಣ್ಣ ಪಟ್ಟಣಗಳು ಹಳ್ಳಿಗಳು ಸಾಕೋ? ಹಿಮಾಲಯದಂಥ ಕಾರಖಾನೆಗಳು, ಅದರಲ್ಲಿ ದುಡಿಯುವ ಕೆಲಸಗಾರರ ಅಗಾಧ ಸೇನಾಸಮೂಹ ಬೇಕೋ ಅಥವಾ ತಮ್ಮ ತಮ್ಮ ಗುಡಿಸಲಲ್ಲಿ ಕೈಗಾರಿಕೆ ಕಸಬನ್ನು ಮಾಡುವ ಕುಟುಂಬಗಳು ಬೇಕೋ? ಸಹಕಾರ ಪದ್ಧತಿಯ ದೊಡ್ಡ ದೊಡ್ಡ ಅಖಂಡ ವ್ಯವಸಾಯಕ್ಷೇತ್ರಗಳು ಬರಲೋ ಇಲ್ಲವೆ ಈಗಿನಂತೆ ಚಿಲ್ಲರೆ ಚಿಲ್ಲರೆ ಹಿಡುವಳಿದಾರರೇ ಇರಲೋ?

ಉತ್ತರ ಹೇಳಲಿಕ್ಕೆ ಇವು ಬಳ್ಳೇ ಪೇಚಿನ ಪ್ರಶ್ನೆಗಳಲ್ಲವೆ? ಹಿಂದಿನ ಪುಟ ನೋಡಿರಿ, ಔದ್ಯೋಗಿಕ ರಾಷ್ಟ್ರಗಳನ್ನೂ ಹಿಂದುಸ್ಥಾನವನ್ನೂ ಹೋಲಿಸಿ ಕೆಲವು ಅಂಶಗಳನ್ನು ತಿಳಿಸಿದೆ. ಉತ್ತರ ಕೊಡಲಿಕ್ಕೆ ಅದು ನಿಮಗೆ ಸಹಾಯ ಮಾಡೀತು.

ಅಮೆರಿಕಾ ಜರ್ಮನಿ ಇಂಗ್ಲೆಂಡುಗಳ ಅದ್ಭುತ ಯಂತ್ರಗಳನ್ನು ನೋಡಿ ಮೆಚ್ಚಿ, ನಮ್ಮ ದೇಶದಲ್ಲಿಯೂ ಹಾಗೆ ಭಾರಿ ಗಿರಣಿಗಳು ಕಾರಖಾನೆಗಳು ಆಗಲಿ ಅನಿಸುತ್ತದೆ ತರುಣರನೇಕರಿಗೆ. ಇದರಂತೆಯೆ ಆ ಯಂತ್ರಗಳನ್ನು ನಡೆಸಲು ಕೆಲಸಗಾರರನ್ನು ದುಡಿಸಿ ಗುಡ್ಡದಷ್ಟು ಲಾಭ ಗಳಿಸಬೇಕೆಂಬ ಭಾರಿ ವ್ಯಾಪಾರಿಗಳೂ

ಬಯಸುತ್ತಾರೆ. ಆದರೆ ಇಂಥ ಸನ್ನಿವೇಶಕ್ಕೆ ಅಸಹ್ಯಪಟ್ಟು ಜನರು ತಮತಮಗೆ ಬೇಕಾದುದನ್ನು ತಾವೇ ಮನೆಯಲ್ಲಿ ಮಾಡಿಕೊಳ್ಳಲಿ ಎಂಬವರೂ ಇದ್ದಾರೆ. ಇಂಥವರಲ್ಲಿ ಮಹಾತ್ಮಾ ಗಾಂಧಿ ಒಬ್ಬರು.

ಯಂತ್ರಪಕ್ಷಪಾತಿ ಕೇಳುತ್ತಾನೆ. 'ದೊಡ್ಡ ದೊಡ್ಡ ಕಬ್ಬಿಣದ, ಉಕ್ಕಿನ ಕಾರಖಾನೆಗಳಿಲ್ಲದಿದ್ದರೆ ಯುದ್ಧಕ್ಕೆ ಬೇಕಾದ ಆಯುಧಸಾಮಗ್ರಿಯಿಲ್ಲದೆ ಹೋಗುತ್ತದೆಯಲ್ಲ ಹೇಗೆ?'

'ನಮಗೆ ಯುದ್ಧ ಮಾಡುವುದು **ಬೇಕಾ**ಗಿಯೇ ಇಲ್ಲವಲ್ಲ, ಯಾರಾದರೂ ನಮ್ಮ ಮೇಲೆ ದಂಡೆತ್ತಿ ಬಂದರೆ ನಾವು ಅಹಿಂಸೆಯಿಂದಲೇ ಪ್ರತಿಭಟಿಸುತ್ತೇವೆ' ಅನ್ನುತ್ತಾನೆ ಗ್ರಾಮಸಂಸ್ಕೃತಿವಾದಿ ವಿವೇಕವಾಗಿ.




ಯಂತ್ರವಿಲ್ಲದಾಗ




ಯಂತ್ರವಿದ್ದರೆ

'ಯಂತ್ರಸಹಾಯವಿದ್ದರೆ ಇಷ್ಟು ಹೊತ್ತು ಸುಮ್ಮನೆ ರೆಟ್ಟೆ ಮುರಿಯ ಬೇಕಾಗಿಲ್ಲ, ಹೆಚ್ಚಾಗಿ ವಿರಾಮಸಿಗುತ್ತದೆ. ನಾಲ್ಕುಗಳಿಗೆ ಹಾಯಾಗಿ ಕಾಲ ಕಳೆಯಬಹುದು' ಆಧುನಿಕತಾವಾದಿ ಬಿಡನು.

'ವಿರಾಮ ಪಾಪಕ್ಕೆ ಮೂಲ, ಗೊತ್ತಿಲ್ಲವೆ? ಕೆಲಸವಿಲ್ಲದ ಕೈಗೆ ಕಲಿ ಮಹಾರಾಯ ಏನಾದರೂ ಕೇಡನ್ನು ಜೋಡಿಸಿಕೊಡುತ್ತಾನಂತೆ' ಗಂಭೀರ ವಾಗಿ ಅದಕ್ಕುತ್ತರ.

'ಹಾಗಾದರೆ **ರಾಟೆಯನ್ನೂ** ಮೂಲೆಗೆ ಹಾಕಿ, ನೇಗಿಲನ್ನೂ ತಳ್ಳಿ ಇಪ್ಪತ್ತುನಾಲ್ಕು ಗಂಟೆಯೂ ಕೈಗಳಿಂದಲೇ ಕೆಲಸ ಮಾಡಿದರಾಯಿತಲ್ಲ' ಎಂದು ನಗುತ್ತಾನೆ ಆಧುನಿಕರಾಯ.

'ದೊಡ್ಡ ಯಂತ್ರಗಳನ್ನು ಸುದಾರಿಸಿಕೊಂಡು ಹೋಗುವಷ್ಟು ಬುದ್ಧಿ ಮನುಷ್ಯನಿಗೆ ಬಂದಿಲ್ಲ' ಎಂದು ವಾದಿಸುತ್ತಾನೆ ಗ್ರಾಮಸಂಸ್ಕೃತಿಯ ಗೌಡ. 'ಯಂತ್ರಕ್ಕೆ ಆಳಾಗಿ ಮನುಷ್ಯ ತನ್ನ ಆತ್ಮವನ್ನೇ ಕಳೆದುಕೊಂಡು ಬರೀ ಗುಂಡಿಯೊತ್ತುವ ಬಾಳು ಬದುಕಿಯಾನು. ಯಂತ್ರದ ಕೈಗಾರಿಕೆಯೆಂದರೆ ಬಹಳ ನಿರುದ್ಯೋಗ ಬೆಳೆಯುತ್ತದೆ. ಯಂತ್ರಗಳ ಒಡೆಯರಾದ ಸಿರಿವಂತರು ಯಂತ್ರ ನಡೆಸುವವರಿಗೆ ಮೋಸಮಾಡುತ್ತಾರೆ.'

ಯಂತ್ರಪಕ್ಷಪಾತಿಗೆ ಹುರುಪು. 'ಹಾಗಲ್ಲ. ಯಂತ್ರವಲ್ಲ ಯಜಮಾನ, ಮನುಷ್ಯನೇ ಯಂತ್ರವನ್ನು ವಶಮಾಡಿಕೊಂಡಿದಾನೆ. ಅಸಹ್ಯವಾದ ಕೊಳೆ ಕೆಲಸವನ್ನೆಲ್ಲ ಅವನ ಕೈಯಿಂದಲೇ ಮಾಡುವುದನ್ನು ತಪ್ಪಿಸಿ, ದಿನವೆಲ್ಲ ದುಡಿದರೆ ಸಂಜೆಯ ಹೊತ್ತಿಗೆ ನಾಲ್ಕು ಹಣ ಹೆಚ್ಚಾಗಿ ಕೊಡುತ್ತದೆ. ಅದರಿಂದ ಸಾಮಾನು ಅಗ್ಗವಾಗಿ ಬಡವನ ಯೋಗ್ಯತೆಗೆ ಮೀರಿದ ವಸ್ತುಗಳನ್ನು ಕೂಡ ಅವನ ಅಳವಿನೊಳಗೆ ತರುತ್ತದೆ. ಯಂತ್ರದಿಂದಲ್ಲದೆ ಅದು ಸಾಧ್ಯವಲ್ಲ. ನಾಲ್ಕು ಜನ ಸಿರಿವಂತರ ಕೈಗೆ ಯಂತ್ರ ಸಿಕ್ಕಿ ಲಾಭ ಗಳಿಸುವ ಹಾಗೆ ಮಾಡಿದರೆ ತಾನೆ ನಿರುದ್ಯೋಗ, ಮೋಸ?'

ಹೀಗೇ ಈ ತರ್ಕ ಕೊನೆಯಿಲ್ಲದೆ ಸಾಗುತ್ತದೆ. ಒಬ್ಬೊಬ್ಬರ ಪಕ್ಷದ ವಾದ ಒಂದೊಂದು ದೊಡ್ಡ ಪುಸ್ತಕ ಬರೆಯುವಷ್ಟಿದೆ! ಎಲ್ಲಾ ವಾದದಲ್ಲಿದ್ದಂತೆ ಇದರಲ್ಲೂ ಎರಡೂ ಕಡೆ ಸತ್ಯವಿದೆ. ಮಹಾತ್ಮಾ ಗಾಂಧೀಜಿಯೇ ಒಂದು ಸಲ ಹೇಳಿದರು: 'ಯಂತ್ರವನ್ನಲ್ಲ ನಾನು ಬೇಡವೆನ್ನುವುದು, ಯಂತ್ರದ ಭ್ರಾಂತಿಯನ್ನು. . . . ರಾಟೆಯೇ ಒಂದು ಕುಶಲವಾದ ಯಂತ್ರ.'

ವಿಜ್ಞಾನದ ಫಲಗಳಲ್ಲಿ ಯಂತ್ರವೂ ಒಂದು; ಅದಕ್ಕೆ ಸುಗುಣವೂ ಇಲ್ಲ, ದುರ್ಗುಣವೂ ಇಲ್ಲ, ಎಂಬುದನ್ನು ಅನೇಕ ಜನ ಮರೆಯುತ್ತಾರೆ. ಅದು ನಿರ್ಗುಣಿ. ವಿಮಾನ ಸಿಡಿಗುಂಡು ಹಾಕಿ ಜನರನ್ನು ಕೊಲ್ಲಲೂ ಬಹುದು,

ದೂರಪ್ರದೇಶದಿಂದ ಒಂದೇ ಗಳಿಗೆಯಲ್ಲಿ ಸಂಜೀವನಿಯಂಥ ಔಷಧವನ್ನೋ ವೈದ್ಯನನ್ನೋ ಕರೆತಂದು ಪ್ರಾಣ ಉಳಿಸಲೂಬಹುದು. ನಾವು ಹೇಗೆ ಬಳಸಿದರೆ ಹಾಗೆ ಯಂತ್ರದ ಗುಣ. ಆದುದರಿಂದ ಯಂತ್ರಗಳನ್ನು ಧ್ವಂಸ ಮಾಡುವುದಲ್ಲ ಉಪಾಯ; ಯಂತ್ರವನ್ನು ವಿವೇಕವಾಗಿಯೂ ದಯೆಯಿಂದಲೂ ಉಪಯೋಗಿಸಲು ಅವರಿಗೆ ಕಲಿಸಬೇಕು.



ಹಿಂದುಸ್ಥಾನ ಗಿರಣಿಗಳ ನಾಡು; ಔದ್ಯೋಗಿಕ ದೇಶವಾದೀತೆಂದು ಹುರುಪಾಗುವ ಕಾರಣವೂ ಇಲ್ಲ, ಗಾಬರಿಯಾಗುವ ಅಗತ್ಯವೂ ಇಲ್ಲ. ನೂರಕ್ಕೆ ಎಪ್ಪತ್ತೆರಡು ಜನ ಭಾರತೀಯರು ಬೇಸಾಯಗಾರರು; ನೂರಕ್ಕೆ 90 ಜನ ಹಳ್ಳಿಗಳಲ್ಲಿರುವವರು. ಇದನ್ನು ಮರೆಯಬಾರದು. ಎಲ್ಲೋ 20 ಲಕ್ಷ ಮಾತ್ರ ಗಿರಣಿ ಕೆಲಸಗಾರರು. ಗಿರಣಿಗಳನ್ನು ಎಷ್ಟೇ ಬೇಗಬೇಗ ಕಟ್ಟುತ್ತ ಹೋದರೂ ಬೆಳೆಬೆಳೆದು ಬರುತ್ತಿರುವ ನಮ್ಮ ಜನರಲ್ಲಿ ಈ 20 ಲಕ್ಷಕ್ಕೆ ಇನ್ನೆರಡು ಕೋಟಿ ಗಿರಣಿ ಕೆಲಸಗಾರರನ್ನು ಸೇರಿಸಿದರೂ ಕೂಡ ಇನ್ನೂ 40 ಕೋಟಿ ಜನಕ್ಕೆ ಬೇಸಾಯ ತಪ್ಪಿದ್ದಲ್ಲ!

ಎಷ್ಟೇ ಶೀಘ್ರ ಪ್ರಗತಿಯಾದರೂ ಹಿಂದುಸ್ಥಾನ ಕೃಷಿಯ ದೇಶವಾಗಿಯೇ ಉಳಿದೀತು. ದಿಳ್ಳಿಗಳಲ್ಲಿ ದುಡಿವ ಕೆಲಸಗಾರರ ನಾಡಾಗಲಿಕ್ಕಿಲ್ಲ. ರೈತರ, ಕೈ ಕಸಬಿನವರ ಹಳ್ಳಿಗಳ ನಾಡೇ ಆದೀತು.

ನಮ್ಮ ಜನಬಲವನ್ನು ಸಾಧ್ಯವಿದ್ದಷ್ಟು ಹೆಚ್ಚಾಗಿ ಬಳಸಿಕೊಂಡು ಸಾಧ್ಯವಿದ್ದಷ್ಟು ಹೆಚ್ಚು ಉತ್ಪತ್ತಿಯಾಗುವಂತೆ ಮಾಡುವ **ಯೋಜನೆ** ಬೇಕು ನಮಗೆ. **ಸಾಧ್ಯವಿದ್ದಷ್ಟೂ ಉದ್ಯೋಗ+ಸಾಧ್ಯವಿದ್ದಷ್ಟೂ ಉತ್ಪತ್ತಿ** ಎಂಬುದು ನಮ್ಮ ಸೂತ್ರವಾಗಬೇಕು.

ಹೀಗೆಂದರೆ ನಮಗೆ ಔದ್ಯೋಗಿಕ ಪರಿಶ್ರಮದ ಚಿಂತೆಯೇ ಬೇಡವೆಂದರ್ಥವೇನು? ಹಾಗಲ್ಲ. ಹಿಂದುಸ್ಥಾನದಲ್ಲಿ ಬೇಸಾಯದ ಮೇಲೆ ಬಿದ್ದಿರುವ ಭಾರವನ್ನು

ಕಡಮೆ ಮಾಡಲಿಕ್ಕೆ ಔದ್ಯೋಗಿಕ ಪ್ರಚಾರ ಆದಷ್ಟು ಬೇಗ ನಡೆಯಬೇಕು. ಈ ಉದ್ಯೋಗಗಳು ಎಷ್ಟೇ ಪ್ರಸಾರವಾದರೂ ನೂರಕ್ಕೆ ಆರು ಜನವಾದರೂ ಪಟ್ಟಣಗಳ ಗಿರಣಿಗಳಲ್ಲಿ ಕಾರಖಾನೆಗಳಲ್ಲಿ ಬಳಸಿ ಬರಲಾರರು. ಹತ್ತು ವರ್ಷ ಹೋದರೂ ಅಷ್ಟೆ. ಆದುದರಿಂದ ಹಳ್ಳಿಗಳಲ್ಲಿ, ಸಣ್ಣಪುಟ್ಟ ಪಟ್ಟಣಗಳಲ್ಲಿ, ನಮ್ಮ ಚಿಕ್ಕ ಪುಟ್ಟ ಕಸಬುಗಳನ್ನು ಹರಡಬೇಕು. ಇದರಿಂದ ಯಾರಿಗೆ ಹೊಲದ ಆಸರೆ ಸಾಲದೋ ಅವರಿಗೆ ತಮ್ಮ ನೆರೆಹೊರೆಯನ್ನು ಬಿಡದೆಯೆ ಅಲ್ಲೇ ಬೇರೆ ಕಸಬನ್ನು ಹಿಡಿಯಲು ಅನುಕೂಲವಾಗುತ್ತದೆ. ಹೊಲಗೆಲಸವಿಲ್ಲದ ವಿರಾಮಕಾಲದಲ್ಲಿ ರೈತರಿಗೆ ತಮ್ಮ ಬಿಡುವಿಗೆ ಸರಿಯಾಗಿ ಒಂದು ಕೈಗೆಲಸ ಸಿಕ್ಕಂತಾಗುತ್ತದೆ. ಹೊಲದ ಕೆಲಸವೇ ಇಲ್ಲದವರು ಸದಾ ಯಾವುದಾದರೊಂದು ಗ್ರಾಮೋದ್ಯೋಗ ವನ್ನು ಅವಲಂಬಿಸಬಹುದು.

ಈ ಗ್ರಾಮೋದ್ಯೋಗಗಳು ಬೇಕಾದಷ್ಟಿವೆ. ಎಲ್ಲಕ್ಕಿಂತ ಹೆಚ್ಚು ಬಳಕೆ ಯಲ್ಲಿರುವವು **ರಾಟೆಯಿಂದ** ನೂಲು ತೆಗೆಯುವುದು, ಕೈಮಗ್ಗದ ಮೇಲೆ ಹತ್ತಿ, ಉಣ್ಣೆ, ರೇಸಿಮೆ ಬಟ್ಟೆಗಳನ್ನು ನೇಯುವುದು. ಈಗಾಗಲೇ ಲಕ್ಷಗಟ್ಟಲೆ ಜನ ಈ ಕಸಬುಗಳನ್ನು ಅವಲಂಬಿಸಿದಾರೆ.

ಹಿಂದುಸ್ಥಾನದಲ್ಲಿ ನೂರಾರು ವರ್ಷದಿಂದ ನಡೆದುಬಂದಿರುವ ಇನ್ನೂ ಕೆಲವು ಕಸಬು ಇವೆ. ಯಂತ್ರದ ಸಾಮಾನಿನ ಪೈಪೋಟಿಗೂ ಜಗ್ಗದೆ ಹಾಗೇ ಬದುಕಿವೆ ಇವು. ಉದಾಹರಣೆಗೆ, ಲೋಹಗಳ ಕೆಲಸ. ಹಳ್ಳಿಯ ಕಮ್ಮಾರನಂತೂ ಒಬ್ಬ ಇದಾನೆಯಲ್ಲ. ಎಷ್ಟೋ ಜನ ಕುಶಲರಾದ ಕಂಚುಗಾರರು ಹಿತ್ತಾಳೆ ತಾಮ್ರ ಬೆಳ್ಳಿ ಬಂಗಾರಗಳಿಂದ ಅಡಿಗೆಯ ಪಾತ್ರೆಗಳನ್ನೂ ಅಂದವಾದ ಒಡವೆ ಗಳನ್ನೂ ಮಾಡುತ್ತಾರೆ.

ಇನ್ನು ಕೆಲವರು ಅಮೃತಶಿಲೆ ದಂತಗಳ ಕೆಲಸಮಾಡುತ್ತಾರೆ. ಮತ್ತೆ ಕೆಲವರು ಜಂಖಾನೆ ಮಾಡುತ್ತಾರೆ. ದೋಣಿ ಮನೆಸಾಮಾನುಗಳಿಂದ ಮಕ್ಕ ಳಾಟದ ಗೊಂಬೆಗಳವರೆಗೂ ಮರದ ಸಾಮಾನು ಆಗುತ್ತವೆ. ಬೆತ್ತದಿಂದ ಬುಟ್ಟಿ, ಮಣ್ಣಿನಿಂದ ಗಡಿಗೆ ಆಗುತ್ತವೆ. ಪಶುಗಳ ತೊಗಲಿನಿಂದ ಚರ್ಮ ಹದಮಾಡುವ, ಮೆಟ್ಟು ಹೊಲಿವ ಚಮ್ಮಾರನಿಗೆ ಉದ್ಯೋಗ.

ಎಣ್ಣೆಗಾಳಿಂದ ಗಾಣವಾಯಿತು. ಎಣ್ಣೆಯಿಂದ ಸಾಬೂನು. ಕಬ್ಬಿನ ರಸ ಬೆಲ್ಲವಾಗುತ್ತದೆ. ನೆಲ್ಲನ್ನು ಒನಕೆಯಿಂದ ಕುಟ್ಟುತ್ತಾರೆ; ಹಾಗೆ ಕುಟ್ಟಿದುದೇ ಗಿರಣಿ ಅಕ್ಕಿಗಿಂತ ಪುಷ್ಟಿಕರ. ಹಣ್ಣನ್ನು ಉಪ್ಪಿನಕಾಯಿ ಸೀಗಾಯಿ (ಮುರಬ್ಬ) ಮಾಡಲಿಕ್ಕೆ ಹಾಕಬಹುದು. ಕಾಗದ ಮಸಿ ಎರಡೂ ಕೈಗೆಲಸದಿಂದಾಗುತ್ತವೆ. ನೇಪಾಳದಲ್ಲಿ ಮಾಡಿದ ಕೈಕಾಗದ ಸಾವಿರ ವರ್ಷ ಬಾಳಿಕೆ ಬರುತ್ತದೆಯಂತೆ.

ಪಶುಪಾಲನೆ ಮಾಡುವವರಿಗೆ ದನ ಎಮ್ಮೆ ಮೇಕೆ ಕೋಳಿ ಇವೆ. ಜೇನು ಹುಳ ಸಾಕುವುದೂ ಲಾಭಕರವಾದ ಕಸಬೇ.

ಇಷ್ಟು ಗ್ರಾಮೋದ್ಯೋಗಗಳಿರುವಾಗ ನಮ್ಮ ಒಕ್ಕಲಿಗರು ಗುಂಪು ಗುಂಪಾಗಿ ಆ ಕಸಬುಗಳನ್ನೇಕೆ ಹಿಡಿಯಬಾರದು? ನಮ್ಮ ಕಸಬುದಾರರೇಕೆ ಹೀಗೆ ನಿರ್ಗತಿಕರಾಗಿದಾರೆ?

ಇದಕ್ಕೆ ಉತ್ತರ—ಅವರಿಗೆ ಬಂಡವಾಳ, ಕೈಚಳಕ, ಗಿರಾಕಿ, ಇವು ಮೂರೂ ಇಲ್ಲ. ಹಿಂದುಸ್ಥಾನದ ಹಳ್ಳಿಗಳ ಜನಕ್ಕೆ ಕಚ್ಚಾದಿನಸು ಕೊಳ್ಳ ಲಿಕ್ಕಾಗಲಿ ಕೈಕಸಬಿನ ಚಿಲ್ಲರೆ ಉಪಕರಣಗಳನ್ನು ಕೊಳ್ಳಲಿಕ್ಕಾಗಲಿ ಕಾಸಿಲ್ಲ. ಅಷ್ಟು ಬಡವರವರು. ಹಸ್ತಕೌಶಲ ಕಡಮೆ. ಅವರ ಅಭಿರುಚಿ ಒಳ್ಳೆಯದಾದರೂ ಹಳೆಯ ತರದ್ದು. ಏನಾದರೂ ತಯಾರುಮಾಡಿದರೆ ಅದನ್ನೆಲ್ಲಿ ಮಾರಬೇಕೋ ಹೇಗೆ ಮಾರಬೇಕೋ ಅದೂ ಗೊತ್ತಿಲ್ಲ.

ಈ ಚಿಕ್ಕ ಪುಟ್ಟ ಕಸಬುಗಳು ಬಲಿತು ನಾಲ್ಕು ಕಾಸು ಬರುವಂತಾಗಿ ಜನರಲ್ಲಿ ಹರಡಬೇಕಾದರೆ ಅವಕ್ಕೆ ಬಹಳ ಸಹಾಯ ಬೇಕು. ಅವನ್ನು ಎತ್ತಿ ನಿಲ್ಲಿಸಬೇಕು. ನೇರವಾಗಿಯೋ ಸಹಕಾರ ಸಂಘಗಳ ಮೂಲಕವೋ ಸರಕಾರ ಈ ಗುಡಿಸಲು ಕೈಗಾರಿಕೆಗಳಿಗೆ ಸಾಲವನ್ನೊದಗಿಸಬೇಕು. ಅಥವಾ ಕಚ್ಚಾ ಮಾಲನ್ನೇ ಒದಗಿಸಿ ಸಾಹುಕಾರರ ಪಾಶದಿಂದ ಬಿಡಿಸಿದರೆ ಮತ್ತೂ ಅನುಕೂಲ.

ಆಮೇಲೆ ಯಂತ್ರವಿದ್ಯಾಶಾಲೆಗಳನ್ನು ತೆರೆದು ಅಲ್ಲಿ ಹೊಸಹೊಸ ಆಯುಧ ಉಪಕರಣಗಳನ್ನೂ ಕಷ್ಟ ಕಡಮೆಮಾಡುವ ಯಂತ್ರಗಳನ್ನೂ ಹೊಸ ಮಾದರಿ ಗಳನ್ನೂ ಸಿದ್ಧಪಡಿಸಿ, ಆರಿಸಿ ತೆಗೆದ ಕಸಬುದಾರರಿಗೆ ಶಿಕ್ಷಣಕೊಡುವ ಏರ್ಪಾಡು ಮಾಡಬೇಕು. ಶಿಕ್ಷಣ ಪಡೆದಮೇಲೆ ಇವರು ಹಳ್ಳಿಗಳಲ್ಲೆಲ್ಲ ತಿರುಗಾಡಿ

ಹಳ್ಳಿಗರಿಗೆ ಹೊಸ ಉಪಕರಣಗಳನ್ನು ಪಯೋಗಿಸಿ ಉತ್ತಮ ವಸ್ತುಗಳನ್ನು ಮಾಡಲು ಕಲಿಸಬಹುದು.

ಈ ವಸ್ತುಗಳನ್ನು 'ಮಾರ್ಕೆಟಿಂಗ್' ಅಧಿಕಾರಿಗಳ ಗುಂಪೋ ಇಲ್ಲವೆ ಸಹಕಾರ ಸಂಘಗಳೋ ಮಾರುವ ವ್ಯವಸ್ಥೆ ಮಾಡಬೇಕು. ಹಾಗಾದರೆಯೆ ಕೆಲಸಗಾರನಿಗೆ ಅವನು ಮಾಡಿದ ಸಾಮಾನಿಗೆ ಸರಿಯಾದ ಬೆಲೆ ಸಿಕ್ಕೀತು.

ಜಪಾನ್ ಸ್ವಿಟ್ಜರ್ಲೆಂಡಿನಲ್ಲಿ ಚಿಕ್ಕಪುಟ್ಟ ಕೈಕಸಬುಗಳು ಜನರೊಳಗೆ ಹರಡಿ ಬಳಕೆಯಾದುದು ಇದೇ ರೀತಿಯಲ್ಲಿಯೆ.

ಕೆಲವು ಸಂದರ್ಭದಲ್ಲಿ ಕೈಯಿಂದ ಮಾಡಿದ ಸಾಮಾನು ಬಹಳ ಅಗ್ಗವಾಗುತ್ತದೆ; ಅದೇ ಕೆಲವು ಸಲ ಕಾರಖಾನೆಯಲ್ಲಿ ತಯಾರಾದ ಸಾಮಾನಿನಷ್ಟು ಅಗ್ಗವಾಗಿರುವುದಿಲ್ಲ. ಆದುದರಿಂದ ದೊಡ್ಡ ಕಾರಖಾನೆಗಳಲ್ಲಿ ಸಣ್ಣಪುಟ್ಟ ವಸ್ತುಗಳನ್ನು ಮಾಡದಂತೆ ಸರಕಾರ ತಡೆಯಬೇಕಾದೀತು.

ಈ ಗ್ರಾಮೋದ್ಯೋಗಗಳಿಗೆ ನಗರಗಳ ಕಾರಖಾನೆಗಳಿಂದಲೂ ಕೆಲವು ಸಾಮಗ್ರಿಬೇಕು. ಯಂತ್ರರಚನಾಗಾರಗಳಿಂದ ಸಣ್ಣಸಣ್ಣ ಯಂತ್ರ, ಚಲೋ ಉಪಕರಣಗಳು ಬೇಕು; ರಾಸಾಯನಿಕ ಕಾರಖಾನೆಗಳಿಂದ ಬಣ್ಣಗಳು, ರಾಸಾಯನಿಕ ವಸ್ತುಗಳು. ನಮ್ಮ ಕೈಗಳು ಎಂದೆಂದಿಗೂ ಮಾಡಲಾರದಷ್ಟು ಬೇಗ ಕೆಲಸಮಾಡಲಿಕ್ಕೆ ಜಲವಿದ್ಯುದ್ಯಂತ್ರಗಳಿಂದ ಯಥೇಷ್ಟವಾಗಿ ಅಗ್ಗವಾಗಿ ವಿದ್ಯುತ್ತು ಬೇಕು. ಹೀಗೆ ದಿಳ್ಳಿ ಹಳ್ಳಿಗಳು ಒಂದರೊಡನೊಂದು ಹೆಣೆದುಕೊಂಡಿವೆ; ಒಂದನ್ನು ಬಿಟ್ಟು ಒಂದು ಬಾಳಲಾರದು.

ಅಂದರೆ, ಈ ದೊಡ್ಡ ದೊಡ್ಡ ಯಂತ್ರಾಗಾರಗಳನ್ನೂ ಕಾರಖಾನೆಗಳನ್ನೂ ಕೈಯಲ್ಲಿಟ್ಟುಕೊಂಡಿರುವ ನಾಲ್ಕೆಂಟು ಜನ ಬಂಡವಾಳಗಾರರು ನಮ್ಮ ಜನರ ಅದೃಷ್ಟಕ್ಕೆ ಕರ್ತರಾಗಿ ಅವರ ಮೂಲಕ ಬೇಕಾದಷ್ಟು ಲಾಭಗಳಿಸಲಿ ಎಂತಲೋ? ಈ ಚಿತ್ರನೋಡಿ; ಹಿಂದುಸ್ಥಾನದಲ್ಲಿ ಕೋಟಿಗಟ್ಟಲೆ ಜನಕ್ಕೆ ಎಲ್ಲೋ ಕಿಂಚಿತ್ತು ಮಾತ್ರ ಸಿಗುತ್ತಿರುವಾಗ ಒಂದು ಹಿಡಿ ಜನ ಮಾತ್ರವೇ ಕೋಟ್ಯಾಧೀಶರಾಗಿದಾರೆಂಬುದನ್ನು ತೋರಿಸುತ್ತದೆ ಇದು. ನೋಡಿ, ಒಬ್ಬರಿಬ್ಬರು ಸಿರಿವಂತರು ಆ ಬೆಟ್ಟದ ತುದಿಗೇರಿದಾರೆ, ಉಳಿದವರೆಲ್ಲ ತಪ್ಪಲಲ್ಲಿ ವಿಸ್ತಾರವಾದ


ರೂ ಪಾ ಯಿ

ವೈದಾನದಲ್ಲೇ ನರಳುತಿದಾರೆ. ಇದರಿಂದ ನಮಗೊಂದು ಘೋರ ವಿಪತ್ತು ಕಾಣುತ್ತಿದೆ. ದೊಡ್ಡ ಕಾರಖಾನೆಯ ಯಜಮಾನರು ತಮ್ಮ ಪ್ರಾಧಾನ್ಯ ಬಲದಿಂದ ಇನ್ನೂ ಮೇಲೇರಲು ಪ್ರಯತ್ನಮಾಡುವುದಿಲ್ಲವೆಂಬ ನಂಬಿಗೆ ಯೇನಿದೆ?

ಇದಕ್ಕೆ ಉತ್ತರ ತೀರಾ ಸರಳ. ಈ ದೊಡ್ಡ ಕಾರಖಾನೆ ಗಿರಣಿಗಳಿಗೆ ಯಜಮಾನರೇ, ಮಾಲಿಕರೇ ಇರಬಾರದು. ಹಾಗಾದರೆ ಅವನ್ನು ಯಾರು ನಡಸ ಬೇಕು? ಯಾಕೆ, ನಾವೆಲ್ಲರೂ ಸೇರಿ ನಡಸೋಣ; ನಮ್ಮ ಸರಕಾರದ ಮೂಲಕ ನಡಸುವ ಏರ್ಪಾಡು ಮಾಡೋಣ. ಅದರಲ್ಲೇನು ವಿಚಿತ್ರವಿದೆ? ನಮ್ಮ ಅಂಚೆಯನ್ನು ಹೊತ್ತುಕೊಂಡು ಹೋಗಲು ನಾವು ಯಾರಿಗಾದರೂ ವ್ಯವಹಾರ ಸ್ಥರಿಗೆ ಒಪ್ಪಂದ (ಕಂಟ್ರಾಕ್ಟು) ಕೊಡುತ್ತೇವೆಯೆ? ಇಲ್ಲ. ನಮ್ಮ ಅಂಚೆಯ ಮನೆಯೇ ಆ ಕೆಲಸವನ್ನು ಬಹಳ ಬೇಗನೆ ಒಳ್ಳೇ ಸಮರ್ಪಕವಾಗಿ ಮಾಡುತ್ತದೆ. ನಮ್ಮ ಪಟ್ಟಣಗಳ ನೀರಿನ ಸರಬರಾಯಿ ಯಾರು ಮಾಡುತ್ತಾರೆ? ನಮ್ಮ ಪರವಾಗಿ ಪೌರಸಭೆಗಳು ಮಾಡವೆ? ಹಿಂದುಸ್ಥಾನದ ರೈಲು ನಡೆಯುವುದು ಸರಕಾರದ ರೇಲವೆ ಬೋರ್ಡಿನಿಂದ. ವಿದ್ಯುತ್ತಿನ ಸರಬರಾಯಿ, ಉಕ್ಕು, ಕಬ್ಬಿಣ, ಯಂತ್ರ, ರಾಸಾಯನಿಕ ಪದಾರ್ಥಗಳು ಮಾತ್ರ ಬಂಡವಾಳಗಾರರ ಕೈಗೇಕೆ ಸಿಗಬೇಕು? ಸರಕಾರವೇ ಮಾಡಬಾರದೇಕೆ?

ನಿಸ್ಸಂದೇಹವಾಗಿ. ಆದಕ್ಕೇ ಮೂಲೋದ್ಯೋಗಗಳೆಲ್ಲ—ಅಂದರೆ ಜನರ ಬಾಳೂ ಇತರ ಕಾರಖಾನೆಗಳೂ ಗಿರಣಿಗಳೂ ಯಾವುದರ ಬಲದ ಮೇಲೆ ನಿಂತಿವೆಯೋ ಅವು—ದೇಶದ ಸಮಷ್ಟಿ ಸ್ವಾಸ್ತಿಯಾಗಿರಲಿ, ಸಮಸ್ತ ಜನರ ಹಿತಕ್ಕಾಗಿ ನಡೆಸಲ್ಪಡಲಿ ಎಂದು ಕೆಲವರು ಅನ್ನುವುದು.

ಅಂದರೆ, ಮುಂದೆ ಕಾಣಲಿರುವ ಹಿಂದುಸ್ಥಾನದ ಚಿತ್ರದಲ್ಲಿ, ಸಮಸ್ತ ಹಿಂದೀ ಜನರ ಸೊತ್ತಾಗಿ ಸರಕಾರದ ಮೂಲಕ ನಡೆಯುವ ಭಾರಿ ಉದ್ಯೋಗಗಳೂ ಒಬ್ಬೊಬ್ಬರದೋ ಒಂದೊಂದು ಸಹಕಾರಸಂಘದ ಗುಂಪಿನದೋ ಸೊತ್ತಾದ ಚಿಕ್ಕ ಕೈಗಾರಿಕೆಗಳೂ ಎರಡೂ ಇವೆ. ಇವೆರಡರ ಜೊತೆಗೆ ಹಿಂದುಸ್ಥಾನದ ಪ್ರಧಾನೋದ್ಯೋಗವಾದ ಬೇಸಾಯವಂತೂ ಇದ್ದೇ ಇದೆ.




ಈ ಮೂರೂ ಜನ ಪಾಲುಗಾರರು—ನಾಡಿನ ಆರ್ಥಿಕಜೀವನದಲ್ಲಿ ಪಾಲು ಗಾರರು—ಹೇಗೆ ಒಬ್ಬರಿಗೊಬ್ಬರು ನೆರವಾಗಿ ಒಬ್ಬರಿಂದೊಬ್ಬರು ಬದುಕುವರೋ ನೋಡಿ.

ಹಿಂದುಸ್ಥಾನವೀಗ ಬರೀ ಬೇಸಾಯದ ನಾಡು, ಮುಂದರಿದ ಬೇರೆ ದೇಶಗಳ ಪಾಲಿಗೆ ಸೌದೆಯೊಡೆದು ನೆಲ ಅಗೆಯುವ ಜನರ ಬೀಡು. ಈ ಅವಸ್ಥೆಯೂ ತಪ್ಪಿ, ಇಂಗ್ಲೆಂಡಿನ ಹಾಗೆ ಬರೀ ಉದ್ಯೋಗಭಾರದಿಂದ ತಿಣಕುವ ಸ್ಥಿತಿಯೂ ಬಾರದಂತೆ, ನಡುವಿನ ರೀತಿಯೊಂದನ್ನು ನಾವೀಗ ಕಂಡು ಹಿಡಿಯಬೇಕು. ನಮಗೆ ಎಷ್ಟೋ ಉದ್ಯೋಗ ಬೇಕಾಗಲಿ, ಅವನ್ನು ನಮ್ಮ ಗುಡಿಸಲುಗಳಲ್ಲಿಯೂ ಸಣ್ಣ ಪಟ್ಟಣಗಳಲ್ಲಿಯೂ ನಾಡಿನಲ್ಲೆಲ್ಲ ಅಲ್ಲಲ್ಲಿ ಹರಡ ಬೇಕು. ಆ ಹಾದಿಯಲ್ಲಿ ಯಂತ್ರದ ಲಾಭವನ್ನು ಕಳೆದುಕೊಳ್ಳದೆ ಅದರ ದೋಷ ಗಳನ್ನೆಲ್ಲ ತಪ್ಪಿಸಬಹುದು.

ಇತರ ದೇಶದ ಜನರಂತೆ ನಮಗೂ ತಿನಲು, ತೊಡಲು, ಬಳಸಲು ಚಲೋ ಪದಾರ್ಥಗಳು ಬೇಕು. ಬಾಳಿನಲ್ಲಿ ಅವೇ ಅತ್ಯುತ್ತಮವೆಂದು ನಮಗವು ಬೇಕಾ

ಗಿಲ್ಲ. ಬಾಳುವೆಯ ಉತ್ತಮ ರುಚಿಯನ್ನು ಗಂಡಸರು, ಹೆಂಗುಸರು, ಮಕ್ಕಳು ಎಲ್ಲರೂ ಅದರಿಂದ ಸವಿದಾರು, ತಮ್ಮೊಳಗಿನ ಉತ್ತಮ ಗುಣವನ್ನು ಬೆಳಗಿಯಾರು ಎಂದು ಅವು ನಮಗೆ ಬೇಕು. ನಮ್ಮ ಸುತ್ತಮುತ್ತ ವಿಶಾಲವಾದ ಹಿಂದುಸ್ಥಾನವಿದೆ. ನಮ್ಮಲ್ಲಿ ಪ್ರತಿಯೊಬ್ಬರೊಳಗೂ ನಮ್ಮ ಹಿಂದುಸ್ಥಾನ ಸ್ವಲ್ಪ ಇದೆ. ನಮ್ಮ **ಒಳಗಿನ**ದನ್ನು ಬೆಳಿಸಲಿಕ್ಕೆ ನಮ್ಮ **ಸುತ್ತಮುತ್ತಿನ**ದನ್ನು ಬೆಳೆಸಲು ಬಯಸುತ್ತೇವೆ. ನಮ್ಮ ದೇಶ ಎಂದರೆ ನಮಗೆ ಎಷ್ಟೋ ಹೆಮ್ಮೆ, ನಾವೆಂದರೆ ನಮ್ಮ ದೇಶಕ್ಕೂ ಅಷ್ಟು ಹೆಮ್ಮೆಯಾಗುವಂತಾಗಬೇಕು.

ಅಂತೇ ಎಲ್ಲರೂ ಕಲೆತು ನಮ್ಮ ಕವಿಶ್ರೇಷ್ಠರಲೊಬ್ಬರಾದ ಮಹಮದ್ ಇಕ್ಬಾಲ್ ನಮಗೆ ನೀಡಿದ ಹಾಡೊಂದನ್ನು ಹೇಳುವ:

ಸಾರೇ ಜಹಾಂ ಸೆ ಅಚ್ಛಾ ಹಿಂದೂಸ್ತಾನ್ ಹಮಾರಾ,
ಹಂ ಬುಲ್‌ಬುಲೇ ಹೈ ಇಸ್ಕಿ, ಯಹ್ ಗುಲಿಸ್ತಾನ್ ಹಮಾರಾ,
ಪರ್ಬತ್ ವೊ ಸಬ್ ಸೆ ಊಂಚಾ ಹಮಸಾಯ ಆಸ್ಮಾನ್ ಕಾ,
ವಹ ಸಂತರಿ ಹಮಾರಾ, ವಹ ಪಾಸ್‌ಬಾನ್ ಹಮಾರಾ.
ಗೋದಿ ಮೆ ಖೇಲ್ತೀ ಹೈ ಇಸ್ಕಿ ಹಜಾರೋಂ ನದಿಯಾ
ಗುಲ್‌ಷನ್ ಹೈ ಜಿಸ್ಕೆ ದಮ್ ಸೆ, ರಷ್‌ಕೆ ಜಹಾ ಹಮಾರಾ.
ಮಝುಬ್ ನಹಿ ಸಿಖಾತಾ ಆಪಸ್ ಮೆ ಬೈರ್ ರಖನಾ,
ಹಿಂದೀ ಹೈ ಹಂ, ವತನ್ ಹೈ ಹಿಂದೂಸ್ತಾನ್ ಹಮಾರಾ.

ಇದು ಹಿಂದುಸ್ತಾನೀ ಕವನ. ಇದರ ಅರ್ಥ ಹೀಗೆ: ಜಗದೊಳಗೆಲ್ಲ ಉತ್ತಮವಾದುದು ನಮ್ಮ ಹಿಂದುಸ್ಥಾನ; ನಾವದರ ಕೋಗಿಲೆಗಳು, ಅದು ನಮ್ಮ ನಂದನವನ; ಎಲ್ಲಕ್ಕೂ ಎತ್ತರವಾದ ಮುಗಿಲನೆರೆಯ ಪರ್ವತರಾಜಿ ನಮ್ಮ ಕಾವಲುಗಾರ, ನಮ್ಮ ಕಾವು; ಸಾವಿರಾರು ನದಿ ಆಡುತಿವೆ ಇದರ ತೊಡೆಯ ಮೇಲೆ, ಜಗವೆಲ್ಲ ಕರುಬುವಂಥ ವನವಾಗಿದೆ ಇದರಿಂದ; ನಮ್ಮ ನಮ್ಮೊಳಗೆ ವೈರ ಕಲಿಸದು ನಮ್ಮ ಧರ್ಮ; ನಾವೆಲ್ಲ ಹಿಂದೀ, ನಮ್ಮ ನಾಡಿದು ಹಿಂದುಸ್ಥಾನ.

ಹಿಂದೀ ಹೈ ಹಂ, ವತನ್ ಹೈ ಹಿಂದೂಸ್ತಾನ್ ಹಮಾರಾ.

PRINTED AT THE WESLEY PRESS AND PUBLISHING HOUSE, MYSORE